# ಸುಖಮನದ ಸ್ವಯಂಭು

# SUKHMANI SAHIB




ಪ್ರಕಾಶಕರು :

**ಗುರು ನಾನಕ್ ಮಿಷನ್ (ರಿ.)**

,ಗುರು ನಾನಕ್ ಹಾಲ್, ಆರ್.ಸಿ. ಪುರಂ, ಗುರುದ್ವಾರ ರೋಡ್, ಬೆಂಗಳೂರು-560 021

Published by :

**GURU NANAK MISSION (R.)**

Guru Nanak Hall, R.C. Puram, Gurudwara Road

Bangalore-560 021

|| ಓಂ ||

" ಒಬ್ಬನೇ ಓಂಕಾರ, ನಾಮ ಸತ್ಯ, ಕರ್ತಾ ಪುರುಷ
ನಿರ್ಭಯನು, ನಿರ್ವೈರಿ, ಅಕಾಲ ಮೂರುತಿಯು
ಅಜನಿತ, ಸ್ವಯಂ ಪ್ರಕಾಶ, ಗುರು ಪ್ರಸಾದಿಯು "

# ಸುಖಮನದ ಸ್ವಯಂಭು
# SUKHMANI SAHIB

ಅನುವಾದ : ಎಸ್. ಶ್ರೀಶೈಲ
Translated by : S. Sreeshaila

For Hanuman Singh MA LLB
412 6th Main 1st Cross
HAL 2nd Stage Indiranagar
Bangalore

ನನ್ನ ಪ್ರಿಯ ಪತ್ನಿ ಸೌ|| ಎಸ್. ಪದ್ಮಾವಿನ ಸವಿನೆನಪಿಗಾಗಿ
Dedicated to my beloved wife
**Smt. S. PADMA**

# "ಸುಖಮನದ ಸ್ವಯಂಭು"

ಅನುವಾದ : **ಎಸ್. ಶ್ರೀಶೈಲ**

ಪ್ರಥಮ ಮುದ್ರಣ : 1996.



ಮುದ್ರಣ : **ಸುಬೋಧ ಪ್ರೆಸ್,**
ಚಾಮರಾಜಪೇಟೆ, ಬೆಂಗಳೂರು–560 018.

ಪ್ರಕಾಶಕರು : **ಗುರು ನಾನಕ್ ಮಿಷನ್ (ರಿ.),**
ಗುರು ನಾನಕ್ ಹಾಲ್, ಆರ್. ಸಿ. ಪುರಂ,
ಗುರುದ್ವಾರ ರಸ್ತೆ, ಬೆಂಗಳೂರು–560 021.

Publishers : **Guru Nanak Mission (R.),**
Guru Nanak Hall, R.C. Puram,
Gurudwara Road, Bangalore–560 021.

**Price : Rs.** **ಬೆಲೆ : ರೂ.**

# ಮುನ್ನುಡಿ

ನಮ್ಮ ಸಿಖ್ ಸಹೋದರರ ಪವಿತ್ರ ಗ್ರಂಥವಾದ 'ಗ್ರಂಥ್ ಸಾಹಿಬ್' ಸಮುಚ್ಚಯದ ಭಾಗವಾದ ಗುರು ಅರ್ಜುನ್ ದೇವ್ ಅವರು ರಚಿಸಿರುವ ಶ್ಲೋಕಗಳ ಈ ಕನ್ನಡ ಪದ್ಯ ಅನುವಾದವು ನನ್ನ ಮಾನ್ಯ ಮತ್ತು ಪ್ರಿಯ ಮಿತ್ರರಾದ ಶ್ರೀ ಎಸ್. ಶ್ರೀಶೈಲರವರು ಕನ್ನಡಿಗರಿಗೆ ನೀಡಿರುವ ಅಮೂಲ್ಯ ಕೊಡುಗೆ

ಶ್ರೀ ಶ್ರೀಶೈಲ ಅವರು ಇದೇ ರೀತಿ ಬಂಗಾಳೀ, ಹಿಂದೀ ಮುಂತಾದ ಭಾಷೆಗಳಲ್ಲಿನ ಉತ್ತಮ ಗೀತೆಗಳನ್ನು ಕನ್ನಡಕ್ಕೂ, ಕನ್ನಡ ಸಾಹಿತ್ಯದ ಉತ್ತಮ ಗೀತೆಗಳನ್ನು ಹಿಂದಿಗೂ ಪದ್ಯ ರೂಪದಲ್ಲಿ ಅನುವಾದಿಸಿ ಈ ಕಲೆಯಲ್ಲಿ ಸಿದ್ಧ ಹಸ್ತರಾಗಿದ್ದಾರೆ.

ಇವರ ಈ ಕಲೆಯ ವೈಶಿಷ್ಟ್ಯವೆಂದರೆ, ಅನುವಾದಿತ ಗೀತೆಗಳನ್ನು ಮೂಲ ಗೀತೆಗಳ ರೀತಿಯಲ್ಲೇ ಹಾಡುವಂತೆ ರಚಿಸಿರುವುದು ವಾಸ್ತವವಾಗಿ ಇವರು ಭಾಷಾಂತರಿಸಿದ ಕೃತಿಗಳ ಪೂರ್ಣ ಪ್ರಯೋಜನವನ್ನು ಪಡೆಯಬೇಕಾದರೆ ಇವರೇ ಅವುಗಳನ್ನು ಹಾಡುವುದನ್ನು ಕೇಳಬೇಕು. ಅವರ ಗಾಯನ ಅಷ್ಟೊಂದು ಭಾವಪೂರ್ಣವಾಗಿಯೂ ಇಂಪಾಗಿಯೂ ಇರುತ್ತದೆ.

ಸಿಖ್ ಗುರುಗಳ ಗೀತೆಗಳು ಭಕ್ತಿಪ್ರಧಾನವಾಗಿರುವುದಲ್ಲದೆ ವಿಶ್ವ ಮಾನವತೆಯ ಸಂದೇಶವನ್ನು ಸಾರುತ್ತವೆ. ಇವುಗಳ ಪಠಣ ಅಥವಾ ಶ್ರವಣದಿಂದ ಎಲ್ಲರ ಜೀವನವೂ ಪಾವನವಾಗುತ್ತವೆ.

ಈ ಕೃತಿಯ ಕೊಡುಗೆಗೆ ಶ್ರೀಶೈಲರನ್ನು ಮನಸಾರ ಅಭಿನಂದಿಸುವುದಲ್ಲದೆ ಇದೇ ರೀತಿಯ ಸತ್ಕಾರ್ಯವನ್ನು ಅವರು ಮುಂದುವರಿಸಲೆಂದು ವಿನಯ ಪೂರ್ವಕವಾಗಿ ಹಾರೈಸುತ್ತೇನೆ.

ಬೆಂಗಳೂರು
16–2–1996

ನಿಟ್ಟೂರು ಶ್ರೀನಿವಾಸರಾವ್
ನಿವೃತ್ತ ಮುಖ್ಯ ನ್ಯಾಯಾಧೀಶರು,
ಕರ್ನಾಟಕ.
49, ಸೌತ್ ಕ್ರಾಸ್ ರೋಡ್,
ಬಸವನಗುಡಿ, ಬೆಂಗಳೂರು-4.

 

## FOREWORD

My dear and respected friend Sri S. Sreeshaila has translated into Kannada, a portion of 'Granth Sahib' which is the sacred book of our Sikh brothers. This tranlation of 'SUKH MANI SAHIB' composed by Guru Arjun Dev, is an invaluable gift of Sri Sreeshaila to the kannada speaking people.

Sri Sreeshaila is an expert in the art of trans-tion. He has translated some of the best poems from Hindi, Bengali and other languages to Kannada and from Kannada to Hindi.

A special feature of his art is that, the poems which he translates can be sung just like the original ones. In fact, to get the full benifit of the poems translated by him, one has to hear them sung by Sri Sreeshaila himself. They are rendered with such feelings and so melodiously.

Though the songs of Sikh Gurus are mainly devotional, they also proclaim the message of 'Universal Humanism'. Reading or listening to these compositions, ennoble's everyone's life.

I heartily commend Sri Sreeshaila for the gift of this work and with respect wish him to continue such good work in future also.

16-2-1996

**Nittor Srinivasa Rao**
Retired Chief Justice of Karnataka,
49, South Cross Road,
Basavanagudi, Bangalore-560004.

# ಮೊದಲ ಮಾತು

1942ರ 'ಭಾರತ ಬಿಟ್ಟು ತೊಲಗಿ' ಆಂದೋಲನಕ್ಕೆ ಮುಂಚಿನ 4 ವರ್ಷಗಳು ನಾನು ಮುಂಬೈಯಿಯಲ್ಲಿದ್ದಾಗ ಅಲ್ಲಿನ ಗುರುದ್ವಾರದ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅವಕಾಶ ಒದಗಿತ್ತು. ಮತ್ತು ನನ್ನ ವ್ಯಾಪಾರದ ಸ್ನೇಹಿತರಲ್ಲಿ ಕೆಲವು ಸಿಂಧಿ ಮತ್ತು ಸಿಖ್ ಸ್ನೇಹಿತರ ಮನೆಗಳಲ್ಲಿ ಭಜನೆ ಮತ್ತು ಶಬದ್‌ಗಳನ್ನು ಹಾಡುತ್ತಿದ್ದೆ. ಇದಾದ 25 ವರ್ಷಗಳ ನಂತರ 1967ರಲ್ಲಿ ಬೆಂಗಳೂರಿನ ಅಲಸೂರು ಗುರುದ್ವಾರದವರು ಗುರು ಗೋವಿಂದ ಸಿಂಹರ 300ನೆಯ ಹುಟ್ಟುಹಬ್ಬದ ಆಚರಣೆಯ ಸಂದರ್ಭದಲ್ಲಿ ಭಾಗವಹಿಸಲು ಕರೆಯಿತ್ತರು. ಅವರ ಕರೆಯನ್ನು ಮನ್ನಿಸಿ ನಾನು ಗುರೂಜಿಯವರ ಪ್ರಾರ್ಥನೆ "ದೇಹಿ ಶಿವ ವರ್ ಮೋಹೆ ಯಿಹೆ, ಶುಭ್ ಕರ್ಮನ್ ತೇ ಕಬ್ ಹೂಂ ನಟರೂಂ" ಇದನ್ನು "ನೀಡು ಶಿವನೇ ಬಿಡದೆ ನಡೆಸಲು ನಿನ್ನ ಮಂಗಳ ಕಾರ್ಯವ, ನನಗೆ ಆಶೀರ್ವಾದವ" ಎಂದು ಕನ್ನಡಾನುವಾದದ ಕೆಲಸವನ್ನು ಪ್ರಾರಂಭಿಸಿ, ಗುರೂಜಿಯವರ ಜೀವನವನ್ನು ಕುರಿತು ಪದ್ಯವನ್ನು ರಚಿಸಿ, ಬೆಂಗಳೂರಿನ ಪುರಭವನದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಹಾಡಿದೆ.

ಆ ಕಾರ್ಯಕ್ರಮದ ನಂತರ ಬೆಂಗಳೂರಿನ ರಾಮಚಂದ್ರಪುರಂ ಮತ್ತು ಅಲಸೂರಿನ ಗುರುದ್ವಾರದವರು ಅವರ ಸಭೆಗಳಲ್ಲಿ ಹಾಡಲು ನನ್ನನ್ನು ಕರೆಯ ುತ್ತಿದ್ದರು. ನಾನು ಪವಿತ್ರ ಗುರುಗ್ರಂಥದಿಂದ ಆಯ್ದ ಕೆಲವು ಶ್ಲೋಕಗಳನ್ನು ಕನ್ನಡಕ್ಕೆ ಅನುವಾದಿಸಿ ಹಾಡುವುದರ ಜೊತೆಗೆ, ಗುರುಗಳ ಜೀವನಕ್ರಮವನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಡುತ್ತಿದ್ದೆ. ಆಗ ರಾಮಚಂದ್ರಪುರದ ಗುರು ನಾನಕ್ ಮಿಷನ್‌ನ ಮೂಲಕ ನನ್ನ ಕನ್ನಡದ ಲೇಖನಗಳನ್ನು, ಅನುವಾದಗಳನ್ನು ಅಚ್ಚುಹಾಕಿಸಿ ಕಿರುಹೊತ್ತಿಗೆಗಳನ್ನು ಸಭಿಕರಿಗೆ ಹಂಚುತ್ತಿದ್ದರು. ಹೀಗೆ ಬೆಂಗಳೂರಿನ ನನ್ನ ಕೆಲವು ಸ್ನೇಹಿತರು ತಮ್ಮ ನೈತಿಕ ಬೆಂಬಲದ ಮೂಲಕ ನನ್ನ ಕೆಲಸಗಳಿಗೆ ಪ್ರೋತ್ಸಾಹವನ್ನು ನೀಡುತ್ತಿದ್ದುದರಿಂದ, ನಾನು ಗುರು ಅರ್ಜುನ್ ದೇವರ ಕೃತಿ "ಸುಖ್‌ಮಣಿ ಸಾಹಿಬ್"ಅನ್ನು ಪೂರ್ಣವಾಗಿ ಕನ್ನಡಕ್ಕೆ ಅನುವಾದಿಸಿ, ಅಚ್ಚಿಗೆ ಸಿದ್ಧಪಡಿಸಲು ಸಾಧ್ಯವಾಯಿತು.

"ಸುಖ್‌ಮಣಿ ಸಾಹಿಬ್"ನಲ್ಲಿರುವ "ಅಸಟ್‌ಪದಿ" ಮತ್ತು "ಸಲೋಕು"ಗಳಲ್ಲಿ ನಾವು ವಿವಿಧ ಪ್ರಾಪಂಚಿಕ ಕರ್ಮಗಳಲ್ಲಿ ತೊಡಗಿದ್ದರೂ, ಪಾರಮಾರ್ಥಿಕ ಜೀವನ

ವನ್ನು ತ್ಯಜಿಸದಿರಲು ಮಾರ್ಗಗಳನ್ನು ಸೂಚಿಸುವಾಗ ಈ ಕೆಳಗಿನ ಅಂಶಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿದೆ :

ನಾವು ಜೀವನದಲ್ಲಿ ಭಕ್ತಿಮಾರ್ಗವನ್ನು ಅನುಸರಿಸಿ ಪ್ರಾರ್ಥನೆ ಮತ್ತು ಭಗವಂತನ ನಾಮಸ್ಮರಣೆಯ ಮೂಲಕ ಅಂತಶ್ಶುಚಿಯನ್ನು ಗಳಿಸಬಹುದು. ಜೀವನದಲ್ಲಿ ಸತ್ಯ ಮತ್ತು ಸೌಂದರ್ಯವನ್ನರಿಯಲು ಸದ್ಗುರುವಿನ ಮಾರ್ಗದರ್ಶನದ ಆವಶ್ಯಕತೆಯಿದೆ. ಸದ್ಗುರುವಿಗೆ ಶರಣಾಗತಿಯ ಮೂಲಕ ಐಹಿಕ ಬಂಧನಗಳಿಂದ ಮುಕ್ತಿಯನ್ನು ಪಡೆದು ದಿವ್ಯಾನಂದವನ್ನು ಸವಿಯಬಹುದು. ಧ್ಯಾನದ ಮೂಲಕ ನಮಗೆ ಪ್ರಕೃತಿಯಲ್ಲಡಗಿರುವ ಪೂರ್ಣತೆಯ ಅರಿವು ಉಂಟಾಗುತ್ತದೆ. ಹೀಗೆ ಆತ್ಮೋನ್ನತಿಗಾಗಿ ಮಾನವನು ಭಕ್ತಿ, ಕರ್ಮ ಮತ್ತು ಜ್ಞಾನ ಮಾರ್ಗಗಳನ್ನು ಅನುಸರಿಸಲು ಆವನಿಗೆ ಸದ್ಗುರುವಿನ ಅನುಗ್ರಹವಿರಬೇಕು—ಎಂಬುದನ್ನು ಸುಲಭ ಗ್ರಾಹ್ಯವಾದ ಭಾಷೆಯಲ್ಲಿ ರಚಿಸಿರುವ 200 ಅಷ್ಟಪದಿಗಳಲ್ಲಿ ತಿಳಿಸಿದೆ

ಈ ಪುಸ್ತಕದಲ್ಲಿ ಮೂಲಕೃತಿಯ 'ಸಲೋಕು' ಮತ್ತು 'ಅಸಟ್‌ಪದಿ'ಗಳನ್ನು ಕನ್ನಡ ಲಿಪಿಯಲ್ಲಿ ಒಂದು ಕಡೆ ಹಾಗೂ ಅದರ ಕನ್ನಡಾನುವಾದವನ್ನು ಮತ್ತೊಂದು ಕಡೆ ಅಚ್ಚು ಹಾಕಿಸಿದೆ. ಇದರಿಂದ ಕನ್ನಡದ ಓದುಗರು 'ಸುಖ್‌ಮಣಿ ಸಾಹಿಬ್'ನ ಮೂಲಕೃತಿಯನ್ನು ಓದಿ ಅರ್ಥಮಾಡಿಕೊಳ್ಳಲು ಅವಕಾಶವಿದೆ. ಗುರುದ್ವಾರದ 'ಸತ್ಸಂಗ'ಗಳಲ್ಲಿ ಭಾಗವಹಿಸಿ ಪ್ರೇರೇಪಿತನಾದ ನಾನು, ಅನುವಾದದ ಶ್ಲೋಕಗಳಲ್ಲಿ ಮೂಲಕೃತಿಯ ಭಾವಮಾಧುರ್ಯವನ್ನು ಅದರ ಅರ್ಥಕ್ಕೆ ಚ್ಯುತಿಬಾರದಂತೆ ಹಿಡಿದಿಡಲು ಪ್ರಯತ್ನಿಸಿದ್ದೇನೆ. ಇದರಿಂದ ಕರ್ನಾಟಕದಲ್ಲಿರುವ ನಮ್ಮ ಸಿಖ್ ಸಹೋದರರು 'ಶಬದ್'ಗಳನ್ನು ಕನ್ನಡದಲ್ಲಿಯೂ ಹಾಡಬಹುದು

1967ರಲ್ಲಿ ಗುರುದ್ವಾರ ಸಮಿತಿಯ ಸದಸ್ಯರಿಗೆ ನನ್ನನ್ನು ಪರಿಚಯಿಸಿದ ಸರ್ದಾರ್ ಅಮರ್‌ಜಿತ್ ಸಿಂಹ (ಬೆಂಗಳೂರಿನ 'ವುಲ್‌ಟಾಪ್' ಸಂಸ್ಥೆಯ ಮಾಲೀಕರು) ಇವರಿಗೆ ನಾನು ಕೃತಜ್ಞತೆಯನ್ನು ಸೂಚಿಸುತ್ತೇನೆ. ಬೆಂಗಳೂರಿನ ರಾಮಚಂದ್ರಪುರದ ಗುರುನಾನಕ್ ಮಿಷನ್‌ನ ಸ್ಥಾಪಕ–ಅಧ್ಯಕ್ಷರಾಗಿದ್ದ ಅವರ ತಂದೆ ದಿವಂಗತ ಜ್ಞಾನಿ ದಿವಾನ್ ಸಿಂಹರವರು ಮಾರ್ಗದರ್ಶಿಗಳಾಗಿ, ನನಗೆ ಮತ್ತು ನನ್ನ ಮಕ್ಕಳಿಗೆ ಗುರುದ್ವಾರದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶವನ್ನೊದಗಿಸಿ, ನನ್ನ ಲೇಖನ–ಅನುವಾದಗಳನ್ನು ಅಚ್ಚು ಹಾಕಿಸಿ, ಎಲ್ಲರಿಗೂ ಹಂಚಿ, ನನ್ನ ಕೆಲಸಗಳಿಗೆ ಪ್ರೋತ್ಸಾಹ ನೀಡಿದ್ದಾರೆ. ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಇವರ ಜೊತೆಗೆ ಸರ್ದಾರ್ ಅವಿನಾಶಿ ಸಿಂಹ ಸಾಹ್ನಿ, ಸರ್ದಾರ್ ಜಗ್‌ಜೀತ್ ಸಿಂಹ ಮಥೋಕ್ ಮತ್ತು 'ಮನ್‌ಜೋಗ್' ಸಂಸ್ಥೆಯ ಸರ್ದಾರ್ ಅವತಾರ್ ಸಿಂಹ

 

ಹಾಗೂ ನಮ್ಮ ಎಲ್ಲಾ ಸಿಖ್ ಸಹೋದರರು ನನ್ನ ಈ ಕಾರ್ಯಗಳಿಗೆ ತಮ್ಮ ನೈತಿಕ ಬೆಂಬಲದ ಮೂಲಕವಾಗಿ ಪ್ರೋತ್ಸಾಹವನ್ನು ನೀಡಿದ್ದಾರೆ. ಅವರೆಲ್ಲರಿಗೂ ನಾನು ಮನಸಾರ ಧನ್ಯವಾದಗಳನ್ನು ಸೂಚಿಸುತ್ತೇನೆ.

ನನ್ನ ಅನುವಾದದ ಕೆಲಸವನ್ನು ಮೆಚ್ಚಿ, ಈ ಪುಸ್ತಕದ ಪ್ರಕಾಶನ ವೆಚ್ಚವನ್ನು ಭರಿಸುತ್ತಿರುವ ಬೆಂಗಳೂರಿನ ರಾಮಚಂದ್ರಪುರದ ಗುರುನಾನಕ್ ಮಿಷನ್‌ನ ಸಮಿತಿಯ ಎಲ್ಲಾ ಸದಸ್ಯರಿಗೂ ನಾನು ಆಭಾರಿಯಾಗಿದ್ದೇನೆ.

ಬೆಂಗಳೂರಿನ ಚಾಮರಾಜಪೇಟೆಯ ಸುಬೋಧ ಅಚ್ಚುಕೂಟದ ಮಾಲೀಕರಾದ ಶ್ರೀ ಆರ್. ಗುರುರಾಜರು ಈ ಪುಸ್ತಕವನ್ನು ತಪ್ಪಿಲ್ಲದೆ, ಅಂದವಾಗಿ ಶ್ರದ್ಧೆಯಿಂದ ಅಚ್ಚು ಹಾಕಿಸಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

ನನ್ನ ತಮ್ಮ ಶ್ರೀ ಎಸ್. ಪಾರ್ಥಸಾರಥಿ (ನಿವೃತ್ತ ಸಹ ಮುಖ್ಯೋಪಾಧ್ಯಾಯ ರಾಮಕೃಷ್ಣ ವಿದ್ಯಾಶಾಲ, ಮೈಸೂರು) ನನ್ನ ಹಸ್ತಲೇಖನ ಪ್ರತಿಯನ್ನು ಪರಿಷ್ಕರಿಸಿ, ಅಚ್ಚಿಗೆ ಸಿದ್ಧಪಡಿಸಿದ್ದಾರೆ. ನನ್ನ ಹಿರಿಯ ಮಗಳು ಶ್ರೀಮತಿ ಕುಮುದಾ ರಾ. (ವಾಣಿಜ್ಯ ಶಾಸ್ತ್ರದ ಪ್ರೊಫೆಸರ್, ಮಹಾರಾಣಿ ಮಹಿಳಾ ಕಲಾ ಕಾಲೇಜು, ಬೆಂಗಳೂರು) ಈ ಪುಸ್ತಕದ ಕೆಲಸಗಳಲ್ಲಿ ನನಗೆ ನೆರವಾಗಿದ್ದಾರೆ. ನನ್ನ ಕಿರಿಯ ಮಕ್ಕಳಾದ ಶ್ರೀಮತಿ ವಿಜಯಲಕ್ಷ್ಮಿ ಮತ್ತು ಕನಕಲಕ್ಷ್ಮಿಯವರು ನನ್ನೊಡನೆ ಸಾರ್ವಜನಿಕ ಸಭೆಗಳಲ್ಲಿ ಭಜನೆಗಳನ್ನು ಹಾಡಲು ಬಂದಿದ್ದಾರೆ. ಇವರೆಲ್ಲರಿಗೂ ನಾನು ನನ್ನ ಧನ್ಯವಾದಗಳನ್ನು ಸೂಚಿಸುತ್ತೇನೆ.

ತಮ್ಮ ನಡೆ-ನುಡಿಗಳಲ್ಲಿ ಗಾಂಧೀವಾದಿಯಾಗಿರುವ, ಕರ್ನಾಟಕದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು, ವಿಶ್ವ ಮಾನವತೆಯ ಸಂದೇಶವನ್ನು ಹರಡಲು ಈ ಪುಸ್ತಕಕ್ಕೆ ಮುನ್ನುಡಿಯನ್ನು ತುಂಬು ಹೃದಯದಿಂದ ಬರೆದುಕೊಟ್ಟಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಸತ್ಸಂಗ, ಧರ್ಮಗ್ರಂಥಗಳು ಮತ್ತು ಗುರುಗ್ರಂಥ ಸಾಹಿಬ್ ನನಗೆ ಇಲ್ಲಿಯ ವರೆಗೆ ಮಾರ್ಗದರ್ಶನ ನೀಡಿದೆ. ಇನ್ನು ಮುಂದೆಯೂ ಅದೇ ಮೂಲದ ಬೆಳಕಿನಲ್ಲಿ ನಾನು ನನ್ನ ಮುಂದಿನ ಕಾರ್ಯಗಳನ್ನು ನೆರವೇರಿಸಬೇಕೆಂದಿದ್ದೇನೆ.

ತಾ॥ 4-3-1996

ಎಸ್. ಶ್ರೀಶೈಲ
ನಂ. 15, 1ನೇ 'ಆರ್' ಬ್ಲಾಕ್,
ರಾಜಾಜಿನಗರ, ಬೆಂಗಳೂರು-560 010
ದೂರವಾಣಿ : 3322427

 

# PREFACE

I was in Bombay for four years prior to Quit India Movement of 1942. Then I had an opportunity to participate in the programmes of Gurudwara in Bombay and also sing Bhajans and Sabads at the houses of Sindhis and Sikhs who were my business friends. After a gap of 25 years, I had a call from Ulsoor Gurudwara in 1967 to participate in the 300th Birth Day Celebrations of Guru Govind Singh. Thenceforth I commenced my work by translating into Kannada Guruji's Prayer "Dehe Shiva var mohe yehe, Shubh karman te kab hoon na taroon" as "Needu Sivane bidade nadisalu ninna mangala kaaryava, nanagay aasheervadava" and also composed a poem about Guruji's life in Kannada to sing on the occasion arranged at Town Hall.

After that programme, I had regular calls from Ramachandrapuram and Ulsoor Gurudwaras in Bangalore, to sing my translations from Guru Granth Sahib and to deliver Leetures in Kannada about Guruji's life. Guru Nanak Mission of Ramachandrapuram, Bangalore printed my lectures and Kannada translations of Sabads and distributed these pamphlets to devotees. Thus my friends in Bangalore Gurudwaras encouraged me through their moral support to translate Guru Arjun Dev's "SUKH MANI SAHIB" into Kannada and also helped me to publish my work.

 

Sukh Mani Sahib indicates the ways to continue our worldly duties without sacrificing our spiritual life. The "ASATPADIS" in Sukh Mani Sahib stress the importance of - Prayer, Devotion to duty, Truth and Beauty in our life and need of enlightened Teacher's guidance, Surrender to such a Teacher for liberation to understand wholesome nature of our existance. Thus (200) Two hundred Asatpadis written in simple language informs that Man needs Spiritual Teacher's Blessing to follow the Paths of Devotion, Duty and Knowledge for his Spiritual upliftment.

In this book the original 'Salokus' and 'Asatpadis' are printed in Kannada script along with its Kannada Translation to enable Kannada speaking people to read and understand original "Sukh Mani Sahib". Being inspired by the "SATSANG" at Gurudwara, I have tried to capture the original works melody with meaning in my translation work, so that, our Sikh brothers in Karnataka can also sing "Sabads" in Kannada.

I am grateful to Saradar Amarjeet Singh (Proprietor, WOOL TOP, Bangalore) for introducing me to Gurudwara Committee in 1967. I remain grateful to his Father Late Ghyani Diwan Singhji, Founder of Guru Nanak Mission, Ramachandrapuram, who encouraged me and my daughters to participate in Gurudwara's Programmes and published some of my works during his life time. I thank Sardar Abinashi Singh Sahani, Sardar Jagjit Singh Madhok and Sardar Avtar Singh of

Manjog and other Sikh Brothers for encouraging me through their moral support to continue these works.

I am grateful to committee members of Guru Nanak Mission, Ramachandrapuram, Bangalore, for recognising my work and providing financial help to publish this book.

I extend my sincere thanks to Sri R. Gururaj, Proprietor, Subodha Press, Chamarajpet, Bangalore, for the flawless printing work done in this book.

I thank my brother Sri S. Parthasarathy (Retd. Asst. Master, Ramakrishna Vidyashala, Mysore) for editing the manuscript and my daughter Mrs. Kumuda, R., (Prof. in Commerce, Maharanis Arts College for Women, Bangalore) who helped me to prepare the script for publication. I thank my younger daughters Mrs. Vijayalakshmi and Mrs Kanaka lakshmi, who often joined me to sing Bhajans in Public programmes.

I am grateful to Sri Nittoor Srinivasa Rao, Retd. Chief Justice of Karnataka, a Gandhian in his thought and service for writing "Foreword" to this book to spread the message of 'Universal humanism'.

Satsang, Scriptures and Guru Granth Sahib has guided me till now, and I seek the light from the same Source to fulfill my Duties in future.

4-3-1996

**S. Sreeshaila,**
**No. 15, First 'R' Block,**
**Rajaji Nagar,**
**Bangalore-560010.**
Res. Ph.: 3322427

# ಗುರು ನಾನಕರ ನಲ್ನುಡಿಗಳು

## 5 ನೇ ಅಧ್ಯಾಯ

## ಗುರು ಅರ್ಜುನ್‌ದೇವ್

ಶ್ಲೋಕ :

ಒಬ್ಬನೇ ಓಂಕಾರ ಸದ್ಗುರು ಪ್ರಸಾದ
ಆದಿ ಗುರುವಿಗೆ ನಮನ
ಯುಗಾದಿ ಗುರುವಿಗೆ ನಮನ
ಸದ್ಗುರುವಿಗೆ ನಮನ
ಶ್ರೀಗುರುದೇವಗೆ ನಮನ.

1 ಓಂ

## ಸುಖ್ ಮನೀ ಸಾಹಿಬ್

ಓಂ ಸತಿಗುರು ಪ್ರಸಾದಿ

ಸಲೋಕು :

ಆದಿ ಗುರುಏ ನಮಹ, ಜುಗಾದಿ ಗುರುಏ ನಮಹ
ಸತಿ ಗುರುಏ ನಮಹ, ಸ್ರೀ ಗುರುದೇವ್ ಏ ನಮಹ ॥

ಅಸಟ್‌ಪದಿ—1

ಸಿಮರ್ ಸಿಮರಿ ಸಿಮರಿ ಸುಖು ಪಾವೊ
ಕಲಿ ಕಲೇಸ್ ತನ್ ಮಾಹಿ ಮಿಟಾವೊ
ಸಿಮರ್ ಜಾಸ್ ಬಿಸುಂಭರ್ ಏಕ್ಕೈ
ನಾಮ್ ಜಪತ್ ಅಗನತ್ ಅನೇಕ್ಕೈ
ವೇದ್ ಪುರಾನ್ ಸಿಂಮ್ರಿತಿ ಸುಧಾಖ್ಯರ್
ಕೀನೇ ರಾಮ್ ನಾಮ್ ಇಕ್ ಅಖ್ಯರ್
ಕಿನ್‌ಕಾ ಏಕ್ ಜಿಸು ಜೀಅ ಬಸಾವೈ
ತಾ ಕೀ ಮಹಿಮಾ ಗನೀ ನ ಆವೈ
ಕಾಖೀ ಏಕ್ಕೈ ದರಸ್ ತುಹಾರೋ
ನಾನಕ್ ಉನ್ ಸಂಗಿ ಮೋಹಿ ಉಧಾರೋ ॥ 1 ॥

1/2

ಸುಖ್‌ಮನೀ ಸುಖ್ ಅಂಮ್ರಿತ್ ಪ್ರಭ್ ನಾಮ್
ಭಗತ್ ಜನಾಕ್ಕೈ ಮನಿ ಬಿಸರಾಮ್
ಪ್ರಭ್ ಕೈ ಸಿಮರನಿ ಗರ್‌ಭಿ ನ ಬಸ್ಸೈ
ಪ್ರಭ್ ಕೈ ಸಿಮರನಿ ದುಖ್ ಜಮ್ ನಸ್ಸೈ
ಪ್ರಭ್ ಕೈ ಸಿಮರನಿ ಕಾಲ್ ಪರ್ ಹರ್ರೈ
ಪ್ರಭ್ ಕೈ ಸಿಮರನಿ ದುಸ್‌ಮನ್ ಟರ್ರೈ
ಪ್ರಭ್ ಸಿಮರತ್ ಕಛು ಬಿಘ್‌ನ್ ನ ಲಾಗ್ಗೈ
ಪ್ರಭ್ ಕೈ ಸಿಮರನಿ ಅನುದಿನ್ ಜಾಗ್ಗೈ

1 ಓಂ

ಸುಖ್ ಮನೀ ಸಾಹಿಬ್

ಓಂ ಸದ್ಗುರುವಿನ ಪ್ರಸಾದ

ಕನ್ನಡದ ಶ್ಲೋಕಾರ್ಥದೊಡನೆ

ಶ್ಲೋಕ :

ಆದಿ ಗುರುವಿಗೆ ನಮನ, ಯುಗಾದಿ ಗುರುವಿಗೆ ನಮನ ;
ಸದ್ಗುರುವಿಗೆ ನಮನ, ಶ್ರೀ ಗುರುದೇವಗೆ ನಮನ.

ಅಷ್ಟಪದಿ—1

ಸರ್ಮಿಸು ಸ್ಮರಿಸೆಲೊ ಸ್ಮರಿಸಿ ಸುಖವನನುಭವಿಸು
ಕಲಿಯ ಕ್ಲೇಶಗಳ ತನುವಿನಿಂದಳಿಸು
ಸ್ಮರಿಸು ವಿಶ್ವಂಭರ ಸೃಷ್ಟಿಕರ್ತನೊಬ್ಬನನ್ನು
ಜಪಿಸುವರು ಅನೇಕರವನ ನಾಮವನ್ನು
ವೇದ ಪುರಾಣ ಸ್ಮೃತಿಗಳೆಲ್ಲ ಅಮೃತಾಕ್ಷರ
ಇದಕೆಲ್ಲ ಸಾಟಿ "ರಾಮ ನಾಮ" ಏಕಾಕ್ಷರ
ನಾಮದ ಕ್ರಿಯೆಗೆಂದು ಇಹನಾರ ಹೃದಯದೊಳು
ಎಟುಕದುಪಮಾನಕ್ಕೆ ಅವನ ಮಹಿಮೆಗಳು
ಯಾರೊಬ್ಬ ನಿನ್ನೊಂದು ದರ್ಶನಕೆ ಕಾತುರನೊ
ಅವನೊಡನೆ ನಾನಕನೆ ಉದ್ಧರಿಸು ನನ್ನನ್ನು ॥ 1 ॥

1/2

ಸುಖ ಮನವು ಸುಖಾಮೃತದ ಪ್ರಭು ನಾಮವು
ಭಕ್ತಜನ ಮನದೊಳಿದು ವಿಶ್ರಮಣವು
ಪ್ರಭು ಸ್ಮರಣೆಯಿಂದಿರದು ಕ್ಷಣ ಗರ್ಭವಾಸ
ಪ್ರಭು ಸ್ಮರಣೆಯಿಂದಿಹುದು ಯಮ ದುಃಖ ನಾಶ
ಪ್ರಭು ಸ್ಮರಣೆಯಿಂದಿಹುದು ಕಾಲ ಪರಿಹಾರ
ಪ್ರಭು ಸ್ಮರಣೆಯಿಂದಿರದು ಯಾರಲ್ಲು ವೈರ
ಪ್ರಭು ಸ್ಮರಣೆಯಲ್ಲಾವ ವಿಘ್ನವೂ ಇಲ್ಲ
ಪ್ರಭು ಸ್ಮರಣೆಯಲ್ಲಿಹುದು ಜಾಗೃತವು ಎಲ್ಲಾ

ಪ್ರಭ್ ಕೈ ಸಿಮರನಿ ಭಉ ನ ಬಿ ಆಪೈ
ಪ್ರಭ್ ಕೈ ಸಿಮರನಿ ದುಖ್ ನ ಸಂತಾಪೈ
ಪ್ರಭ್ ಕಾ ಸಿಮರನ್ ಸಾಧ್ ಕೈ ಸಂಗಿ
ಸರಬ್ ನಿಧಾನ್ ನಾನಕ್ ಹರಿ ರಂಗಿ ॥ 2 ॥

1/3

ಪ್ರಭ್ ಕೈ ಸಿಮ್‌ರನಿ ರಿಧಿ ಸಿಧಿ ನಉನಿಧಿ
ಪ್ರಭ್ ಕೈ ಸಿಮ್‌ರನಿ ಗಿಆನ್ ಧಿಆನ್ ತತು ಬುಧಿ
ಪ್ರಭ್ ಕೈ ಸಿಮ್‌ರನಿ ಜಪ್ ತಪ್ ಪೂಜಾ
ಪ್ರಭ್ ಕೈ ಸಿಮ್‌ರನಿ ಬಿನಸೈ ದೂಜಾ
ಪ್ರಭ್ ಕೈ ಸಿಮ್‌ರನಿ ತೀರಥ್ ಇಸ್‌ನಾನೀ
ಪ್ರಭ್ ಕೈ ಸಿಮ್‌ರನಿ ದರ್‌ಗಹ್ ಮಾನೀ
ಪ್ರಭ್ ಕೈ ಸಿಮ್‌ರನಿ ಹೋಇ ಸು ಭಲಾ
ಪ್ರಭ್ ಕೈ ಸಿಮ್‌ರನಿ ಸುಫಲ್ ಫಲಾ
ಸೆ ಸಿಮ್‌ರಹಿ ಜಿನ್ ಆಪಿ ಸಿಮಿರಾಏ
ನಾನಕ್ ತಾಕೈ ಲಾಗಉ ಪಾಏ ॥ 3 ॥

1/4

ಪ್ರಭ್ ಕಾ ಸಿಮ್‌ರನ್ ಸಭ್‌ಕೆ ಊಚಾ
ಪ್ರಭ್ ಕೈ ಸಿಮ್‌ರನಿ ಉಧರೆ ಮೂಚಾ
ಪ್ರಭ್ ಕೈ ಸಿಮ್‌ರನಿ ತ್ರಿಸ್‌ನಾ ಬುಝೈ
ಪ್ರಭ್ ಕೈ ಸಿಮ್‌ರನಿ ಸಭ್‌ಕಿಛು ಸುಝೈ
ಪ್ರಭ್ ಕೈ ಸಿಮ್‌ರನಿ ನಾಹಿ ಜಮ್ ತ್ರಾಸಾ
ಪ್ರಭ್ ಕೈ ಸಿಮ್‌ರನಿ ಪೂರನ್ ಆಸಾ
ಪ್ರಭ್ ಕೈ ಸಿಮ್‌ರನಿ ಮನ್ ಕೀ ಮಲ್ ಜಾಇ
ಅಂಮ್ರಿತ್ ನಾಮ್ ರಿದ್ ಮಾಹಿ ಸಮಾಇ
ಪ್ರಭ್ ಜೀ ಬಸ್‌ಹಿ ಸಾಧ್ ಕೀ ರಸ್‌ನಾ
ನಾನಕ್ ಜನ್ ಕಾ ದಾಸ್‌ನಿ ದಸ್‌ನಾ ॥ 4 ॥

ಪ್ರಭು ಸ್ಮರಣೆಯಿಂದಾವ ಭಯವಿರುವದಿಲ್ಲ
ಪ್ರಭು ಸ್ಮರಣೆಯಿಂದಾವ ದುಃಖ ಸಂತಾಪವಿಲ್ಲ
ಪ್ರಭು ಸ್ಮರಣೆಯಿಂದಿಹುದು ಸಾಧು ಸಂತರ ಸಂಗ
ದಯೆಯ ಭಂಡಾರ ಹೇ ನಾನಕನೆ ಹರಿ ರಂಗ ॥ 2 ॥

1/3

ಪ್ರಭು ಸ್ಮರಣೆಯಲ್ಲಿಹುದು ವೃದ್ಧಿ ಸಿದ್ಧಿ ನವನಿಧಿ
ಪ್ರಭು ಸ್ಮರಣೆಯಲ್ಲಿಹುದು ಜ್ಞಾನ ಧ್ಯಾನ ತತ್ವ ಬುದ್ಧಿ
ಪ್ರಭು ಸ್ಮರಣೆಯಿಂದ ಲಭ್ಯ ಜಪ ತಪಾದಿ ಅರ್ಚನೆ
ಪ್ರಭು ಸ್ಮರಣೆಯಿಂದ ನಾಶ ಬೇರೆಂಬ ಭಾವನೆ
ಪ್ರಭು ಸ್ಮರಣೆಯಲ್ಲಿಹುದು ಸಕಲ ತೀರ್ಥ ಸ್ನಾನವು
ಪ್ರಭು ಸ್ಮರಣೆಯಲ್ಲಿಹುದು ರಾಜ್ಯೋನ್ನತ ಸನ್ಮಾನವು
ಪ್ರಭು ಸ್ಮರಣೆಯಿಂದೆಲ್ಲ ಆಗುವುದು ಒಳ್ಳೆಯದು
ಪ್ರಭು ಸ್ಮರಣೆಯಿಂದ ಫಲ ಫಲಿಸುವುದು ಹಿರಿದು
ತನ್ನ ತಾ ಸ್ಮರಿಸುವನು ಸ್ಮರಿಸಿಸುವನಿತರರನು
ನಾನಕನೆ ತಾನವನ ಪಾದಗಳಿಗೆರಗುವನು ॥ 3 ॥

1/4

ಪ್ರಭು ಸ್ಮರಣೆ ಎಲ್ಲದಕು ಮೇಲಾದುದು
ಪ್ರಭು ಸ್ಮರಣೆ ಅಸಂಖ್ಯರನು ಈಜಿಸಿಹುದು
ಪ್ರಭು ಸ್ಮರಣೆ ತೃಷೆಯನಳಿಸುವುದು
ಪ್ರಭು ಸ್ಮರಣೆ ಸಕಲವನು ತಿಳಿಸುವುದು
ಪ್ರಭು ಸ್ಮರಣೆಯಿಂದ ಯಮನ ಭಯವಿಲ್ಲ
ಪ್ರಭು ಸ್ಮರಣೆಯಿಂದ ಪೂರ್ಣ ಹಿರಿಯಾಸೆಯೆಲ್ಲ
ಪ್ರಭು ಸ್ಮರಣೆಯಿಂದ ಮನದ ಮಲ ನಾಶ
ನಾಮ ರೂಪಾಮೃತವು ಹೃದಯದಲಿ ಆವಾಸ
ಪ್ರಭುವಿಹನು ಸಂತರ ನಾಲಿಗೆಯ ಮೇಲೆಲ್ಲ
ನಾನಕನೆ ದಾಸಾನುದಾಸತಾ ಭಕ್ತ ಜನಕೆಲ್ಲ ॥ 4 ॥

1/5

ಪ್ರಭ್ ಕಉ ಸಿಮರ್‌ಹಿ ಸೆ ಧನ್‌ವಂತೆ
ಪ್ರಭ್ ಕಉ ಸಿಮರ್‌ಹಿ ಸೆ ಪತಿವಂತೆ
ಪ್ರಭ್ ಕಉ ಸಿಮರ್‌ಹಿ ಸೆ ಪರ್‌ವಾನ್
ಪ್ರಭ್ ಕಉ ಸಿಮರ್‌ಹಿ ಸೆ ಪುರಖ್ ಪ್ರಧಾನ್
ಪ್ರಭ್ ಕಉ ಸಿಮರ್‌ಹಿ ಸಿ ಬೇಮುಹ್‌ತಾಜೆ
ಪ್ರಭ್ ಕಉ ಸಿಮರ್‌ಹಿ ಸಿ ಸರ್‌ಬ್‌ಕೇ ರಾಜೇ
ಪ್ರಭ್ ಕಉ ಸಿಮರ್‌ಹಿ ಸೆ ಸುಖ್‌ವಾಸೀ
ಪ್ರಭ್ ಕಉ ಸಿಮರ್‌ಹಿ ಸೆ ಸದಾ ಅಬಿನಾಸಿ
ಸಿಮಿರನ್ ತೇ ಲಾಗೇ ಜಿನ್ ಆಪಿ ದಯಾಲಾ
ನಾನಕ್ ಜನ್ ಕೀ ಮಂಗೈ ರವಾಲಾ ॥ 5 ॥

1/6

ಪ್ರಭ್ ಕೈ ಸಿಮ್‌ರನಿ ಕಾರಜ್ ಪೂರೆ
ಪ್ರಭ್ ಕೈ ಸಿಮ್‌ರನಿ ಕಬ್‌ಹು ನ ಝೂರೆ
ಪ್ರಭ್ ಕೈ ಸಿಮ್‌ರನಿ ಹರಿ ಗುನ್ ಬಾನೀ
ಪ್ರಭ್ ಕೈ ಸಿಮ್‌ರನಿ ಸಹ್‌ಜಿ ಸಮಾನೀ
ಪ್ರಭ್ ಕೈ ಸಿಮ್‌ರನಿ ನಿಹ್‌ಚಲ್ ಆಸನ್
ಪ್ರಭ್ ಕೈ ಸಿಮ್‌ರನಿ ಕಮಲ್ ಬಿಗಾಸನ್
ಪ್ರಭ್ ಕೈ ಸಿಮ್‌ರನಿ ಅನ್‌ಹದ್ ಝುನ್‌ಕಾರ್
ಸುಖ್ ಪ್ರಭ್ ಸಿಮ್‌ರನ್ ಕಾ ಅಂತ್ ನ ಪಾರ್
ಸಿಮ್‌ರಹಿ ಸೇ ಜನ್ ಜಿಸ್ ಕಉ ಪ್ರಭ್ ಮಯಾ
ನಾನಕ್ ತಿನ್ ಜನ್ ಸರ್‌ನೀ ಪಾಯಾ ॥ 6 ॥

1/7

ಪ್ರಭ್‌ಕೊ ಸಿಮರ್‌ಹಿ ಸೆ ಪರ್ ಉಪ್‌ಕಾರೀ
ಪ್ರಭ್‌ಕೊ ಸಿಮರ್‌ಹಿ ತಿನ್‌ಸದ್ ಬಲಿಹಾರೀ
ಪ್ರಭ್ ಕಉ ಸಿಮರ್‌ಹಿ ಸೆ ಮುಖ್ ಸುಹಾವೆ
ಪ್ರಭ್ ಕಉ ಸಿಮರ್‌ಹಿ ತಿನ್ ಸೂಖಿ ಬಿಹಾವೈ

1/5

ಪ್ರಭುವ ಸ್ಮರಿಸುವರು ಸಿರಿವಂತರು
ಪ್ರಭುವ ಸ್ಮರಿಸುವರು ಹಿರಿವಂತರು
ಪ್ರಭುವ ಸ್ಮರಿಸುವರು ಪ್ರಭುವನೊಪ್ಪಿದವರು
ಪ್ರಭುವ ಸ್ಮರಿಸುವರು ಪುರುಷಪ್ರಧಾನರು
ಪ್ರಭುವ ಸ್ಮರಿಸುವರು ದರಿದ್ರರಲ್ಲ
ಪ್ರಭುವ ಸ್ಮರಿಸುವರು ರಾಜರೆಲ್ಲ
ಪ್ರಭುವ ಸ್ಮರಿಸುವವರಾನಂದ ವಾಸಿಗಳು
ಪ್ರಭುವ ಸ್ಮರಿಸುವರು ಸದಾ ಅವಿನಾಶಿಗಳು
ಪ್ರಭುವ ಸ್ಮರಿಸುತಿರುವರಿಗವನತಿ ದಯಾಳು
ನಾನಕನೆ ! ನನಗಿರಲಿ ಆ ಭಕ್ತರ ಪಾದಧೂಳು ॥ 5 ॥

1/6

ಪ್ರಭು ಸ್ಮರಣೆಯಲ್ಲಿಹುದು ಕಾರ್ಯ ಮುಕ್ತಾಯ
ಪ್ರಭು ಸ್ಮರಣೆಯಲ್ಲಿರದು ಯಾವ ದುಃಖ ಭಯ
ಪ್ರಭು ಸ್ಮರಣೆಯಲ್ಲಿಹುದು ಹರಿಯ ಗುಣ ವಾಣಿ
ಪ್ರಭು ಸ್ಮರಣೆಯಾಗಿಹುದು ಸಹಜ ಸಮಪಾಣಿ
ಪ್ರಭು ಸ್ಮರಣೆಯಲ್ಲಿಹುದು ಅಮಲ ಅಚಲಾಸನ
ಪ್ರಭು ಸ್ಮರಣೆಯಲ್ಲಿಹುದು ಹೃದಯ ಕಮಲಾಸನ
ಪ್ರಭು ಸ್ಮರಣೆಯಲ್ಲಿಹುದು ಅನಹದ ಝುಂಕಾರ ನಾದ
ಪ್ರಭು ಸ್ಮರಣೆಯಲ್ಲಿಹುದು ಸುಖ ಅನಂತಪಾರವಾದ
ಸ್ಮರಿಸುವರು ಪ್ರಭುವಿನ ದಯೆ ದೊರೆತ ಘಳಿಗೆ
ನಾನಕನೆ ನಾ ಶರಣು ಅವರ ಪಾದಗಳಿಗೆ ॥ 6 ॥

1/7

ಪ್ರಭುವ ಸ್ಮರಿಸುವರು ಪರೋಪಕಾರಿಗಳು
ಪ್ರಭುವ ಸ್ಮರಿಸುವರಿಗೆನ್ನ ಪಂಚಪ್ರಾಣಗಳು
ಪ್ರಭುವ ಸ್ಮರಿಸುವರ ಮುಖ ಸುಂದರ
ಪ್ರಭುವ ಸ್ಮರಿಸುವರಿಗಿಹುದು ಸುಖದಾದರ

ಪ್ರಭ್ ಕಉ ಸಿಮರ್‌ಹಿ ತಿನ್ ಆತ್‌ಮು ಜೀತಾ
ಪ್ರಭ್‌ಕೊ ಸಿಮರ್‌ಹಿ ತಿನ್‌ನಿರ್‌ಮಲ್ ರೀತಾ
ಪ್ರಭ್‌ಕೊ ಸಿಮರ್‌ಹಿ ತಿನ್ ಅನದ್ ಘನೇರೇ
ಪ್ರಭ್‌ಕೊ ಸಿಮರ್‌ಹಿ ಬಸ್‌ಹಿ ಹರಿ ನೇರೇ
ಸಂತ್ ಕ್ರಿಪಾ ತೇ ಅನ್‌ದಿನ್ ಜಾಗಿ
ನಾನಕ್ ಸಿಮ್‌ರನ್ ಪೂರೈ ಭಾಗಿ ॥ 7 ॥

1/8

ಹರಿ ಸಿಮರನ್ ಕರಿ ಭಗತ್ ಪ್ರಗಟಾಏ
ಹರಿ ಸಿಮರನಿ ಲಗಿ ಬೇದ್ ಉಪಾಏ
ಹರಿ ಸಿಮರನಿ ಭಏ ಸಿಧ್ ಜತೀ ದಾತೇ
ಹರಿ ಸಿಮರನಿ ನೀಚ್ ಚಹು ಕುಂಟ್ ಜಾತೇ
ಹರಿ ಸಿಮರನಿ ಧಾರೀ ಸಭ್ ಧರ್‌ನಾ
ಸಿಮರಿ ಸಿಮರಿ ಹರಿಕಾರನ್ ಕರ್‌ನಾ
ಹರಿ ಸಿಮರನಿ ಕೀಓ ಸಗಲ್ ಅಕಾರಾ
ಹರಿ ಸಿಮರನ್ ಮಹಿ ಆಪಿ ನಿರಂಕಾರಾ
ಕರಿ ಕಿರ್‌ಪಾ ಜಿಸ್ ಆಪಿ ಬುಝಾಯಾ
ನಾನಕ್ ಗುರ್‌ಮುಖಿ ಹರಿ ಸಿಮರನ್ ತಿನಿ ಪಾಯಾ ॥ 8 ॥

ಸಲೋಕು :

ದೀನ್ ದರದ್ ದುಖ್ ಭಂಜ್‌ನಾ
ಘಟಿ ಘಟಿ ನಾಥ್ ಅನಾಥ್
ಸರಣಿ ತುಮ್ಹಾರೀ ಆಯೊ
ನಾನಕ್ ಕೇ ಪ್ರಭ್ ಸಾಥ್

ಅಸಟ್‌ಪದೀ—2

ಜಹ್ ಮಾತ್ ಪಿತಾ ಸುತ್ ಮೀತ್ ನ ಭಾಈ
ಮನ್ ಊಹಾ ನಾಮ್ ತೇರೈ ಸಂಗೀ ಸಹಾಈ

ಪ್ರಭು ಸ್ಮರಿಸುವಾತ್ಮಕಿದೆ ವಿಜಯ ಪ್ರಾಪ್ತಿ
ಪ್ರಭು ಸ್ಮರಿಸುವಾತ್ಮಕಿದೆ ನಿರ್ಮಲದ ರೀತಿ
ಪ್ರಭು ಸ್ಮರಿಸುವರಿಗಿಹುದು ಎಲ್ಲೆಲ್ಲು ಆನಂದ
ಪ್ರಭು ಸ್ಮರಿಸುವರಿಗಿಹುದು ಹರಿಯೊಡನೆ ಸಂಬಂಧ
ಸಂತರ ಕೃಪೆಯಿಂದ ಜಾಗೃತರು ದಿವ ರಾತ್ರಿ
ನಾನಕನೆ ಭಾಗ್ಯ ಪೂರ್ಣರೆ ಸ್ಮರಣಾ ಪಾತ್ರಿ ॥ 7 ॥

1/8

ಹರಿ ಸ್ಮರಣೆಯಿಂದ ಭಕ್ತ ವೃಂದ ಪ್ರಕಟವಾಯಿತು
ಹರಿ ಸ್ಮರಣೆಯಿಂದಲೇ ವೇದ ಉದಯುವಾಯಿತು
ಹರಿ ಸ್ಮರಣೆಯಾಗಿಸಿತು ಸಿದ್ಧ ದಾನಿ ಯತಿಗಳನು
ಹರಿ ಸ್ಮರಣೆಯಳಿಸಿತು ಎಲ್ಲ ನೀಚ ಮತಿಗಳನು
ಹರಿ ಸ್ಮರಣೆಯಿಂದಲೇ ಧರೆಯು ಧರಣಿಯಾಯಿತು
ಹರಿ ಸ್ಮರಣೆ ಕಾರಣ ಹರಿಯು ಕಾರ್ಯವಾಯಿತು
ಹರಿ ಸ್ಮರಣೆಯಿಂದಾಯ್ತು ಆಕಾರಗಳೆಲ್ಲವೂ
ಹರಿ ಸ್ಮರಣೆಯಿಂದಾಯ್ತು ಎಲ್ಲ ನಿರಾಕಾರವೂ
ಕೃಪೆದೋರಿ ತನ್ನರಿವ ತಾ ನೀಡಿದವಗೆ
ನಾನಕ ! ಗುರು ಮುಖೇನ ಹರಿ ಸ್ಮರಣೆ ಸಂದಿತವಗೆ ॥ 8 ॥

ಶ್ಲೋಕ :

ದೀನ ದುರಿತ ದುಃಖ ಭಂಜನನೆ
ಘಟ ಘಟದೊಳ್ ಅನಾಥರ ನಾಥ
ಶರಣಾಗುತ ಬಂದಿಹೆ ನಾ ನಿನ್ನ
ನಾನಕನೊಡನೆಯೆಂ ಹೇ ಜಗತ್ರಾತ

ಅಷ್ಟಪದಿ—2

ಎಲ್ಲಿ ತಾಯಿ ತಂದೆ ಬಂಧು ಬಳಗ ಯಾರು ಇಲ್ಲವೋ
ಅಲ್ಲಿ ಮನವೆ ನಿನ್ನ ನಾಮ ಒಂದೆ ಎಮಗೆ ಸಂಗವು

ಜಹ್ ಮಹಾ ಭಯಾನ್ ದೂತ್ ಜಮ್ ದಲೈ
ತಹ್ ಕೇವಲ್ ನಾಮ್ ಸಂಗೀ ತೇರೈ ಚಲೈ
ಜಹ್ ಮುಸ್‌ಕಲ್ ಹೋವೈ ಅತಿ ಭಾರೀ
ಹರಿ ಕೋ ನಾಮ್ ಖಿನ್ ಮಾಹಿ ಉಧಾರೀ
ಅನಿಕ್ ಪುನಹ್ ಚರನ್ ಕರತ್ ನಹೀ ತರೈ
ಹರಿ ಕೋ ನಾಮು ಕೋಟಿ ಪಾಪ್ ಪರ್ ಹರೈ
ಗುರ್‌ಮುಖಿ ನಾಮ್ ಜಪ್‌ಹು ಮನ್ ಮೇರೇ
ನಾನಕ್ ಪಾವೆ ಸೂಖ್ ಘನೇರೇ ॥ 1 ॥

2/2

ಸಗಲ್ ಸ್ರಿಸ್‌ಟಿ ಕೋ ರಾಜ ದುಖಿಯಾ
ಹರಿಕಾ ನಾಮ್ ಜಪತ್ ಹೋಈ ಸುಖಿಯಾ
ಲಾಖ್ ಕರೋರೀ ಬಂಧುನ ಪರೈ
ಹರಿ ಕಾ ನಾಮ್ ಜಪತ್ ನಿಸ್‌ತರೈ
ಅನಿಕ್ ಮಾಯಾ ರಂಗ್ ತಿಖ್ ನ ಬುಝಾವೆ
ಹರಿ ಕಾ ನಾಮ್ ಜಪತ್ ಆಘಾವೆ
ಜಿಹ್ ಮಾರ್‌ಗಿ ಇಹ್ ಜಾತ್ ಇಕೇಲಾ
ತಹ್ ಹರಿ ನಾಮ್ ಸಂಗಿ ಹೋತಾ ಸುಹೇಲಾ
ಐಸಾ ನಾಮ್ ಮನ್ ಸದಾ ಧ್ಯಾಇಯೆ
ನಾನಕ್ ಗುರ್‌ಮುಖಿ ಪರಮ್ ಗತಿ ಪಾಇಯೇ ॥ 2 ॥

2/3

ಛೂಟತ್ ನಹೀ ಕೋಟಿ ಲಖ್ ಬಾಹೀ
ನಾಮ್ ಜಪತ್ ತಹ್ ಪಾರಿ ಪರಾಹೀ
ಅನಿಕ್ ಬಿಘನ್ ಜಹ್ ಆಇ ಸಂಘಾರೈ
ಹರಿ ಕಾ ನಾಮು ತತ್‌ಕಾಲ್ ಉಧಾರೈ
ಅನಿಕ್ ಜೋನಿ ಜನ್ಮೈ ಮರಿ ಜಾಮ್
ನಾಮ್ ಜಪತ್ ಪಾವೈ ಬಿಸ್ರಾಮ್

ಎಲ್ಲಿ ಭಯದ ದೂತ ಯಮನು ಸುಯ್ಯಾಡುತಿರುವನೋ
ಅಲ್ಲಿ ಸಹ ಜೊತೆಗೆ ಬರುವುದೊಂದೆ ನಿನ್ನ ನಾಮವು
ಅತಿ ಹಿರಿಯ ಕಷ್ಟಗಳು ಬಂದರೆಲ್ಲಿಯಾದರೂ
ಅಲ್ಲೂ ಜೊತೆಗೆ ಉದ್ಧರಿಸುವುದೊಂದೆ ನಿನ್ನ ನಾಮವು
ಅನೇಕ ಪುಣ್ಯಾಚರಣೆ ಸಹ ಎಲ್ಲಿ ತೇಲಿಸಿಲ್ಲವೋ
ಅಲ್ಲೂ ಪಾಪಹಾರಕ ಹರಿಯ ಕೋಟಿ ನಾಮವು
ಗುರುಮುಖದ್ವಾರದಿಂದ ಜಪಿಸು ಹರಿಯ ನಾಮವ
ನಾನಕನೆ ಈ ರೀತಿಯಿಂದ ಗಳಿಸು ಅಧಿಕ ಸೌಖ್ಯವ ॥ 1 ॥

2/2

ಸೃಷ್ಟಿಗೆಲ್ಲ ಒಡೆಯನಾದ ರಾಜನೂ ದುಃಖಿತನು
ಹರಿ ನಾಮ ಜಪಿಸುತ ಪಡೆವ ಸರ್ವ ಸುಖವನು
ಕೋಟಿ ಕೋಟಿ ಬಂಧನಗಳೆರಗಿ ಮೇಲೆ ಬಿದ್ದರೂ
ಹರಿ ನಾಮ ಜಪಿಸಲು ಈಜಿಬಿಡುವರೆಲ್ಲರೂ
ಬಣ್ಣ ಬಣ್ಣ ಮಾಯೆಯೆಲ್ಲ ನೀರಡಿಕೆಯನಡಗಿಸದು
ಹರಿ ನಾಮ ಜಪಿಸಲು ಮನಕೆ ತೃಪ್ತಿಯಾಗುವುದು
ಒಂಟಿಯಾಗಿ ಯಾವ ದಾರಿ ಹಿಡಿದು ಮುಂದೆ ನಡೆವನೋ
ಹರಿ ನಾಮ ನೀಡುವುದು ಸಕಲ ಸೌಖ್ಯ ಭಾಗ್ಯವನು
ಮನವೆ ಸದಾ ಹಸನಾದ ಹರಿಯ ನಾಮ ಧ್ಯಾನಿಸು
ನಾನಕನೆ ಗುರುವಿನಿಂದ ಮುಕ್ತಿ ನಿನ್ನದಾಗಿಸು ॥ 2 ॥

2/3

ಕೋಟಿ ಕೋಟಿ ಮೂಲದಿಂದ ಮುಕ್ತಿ ದೊರಕದಿದ್ದರೂ
ಹರಿಯ ಜಪಿಸು ಮರುಕ್ಷಣ ದೋಣಿ ದಡ ಸೇರುವುದು
ಎಲ್ಲನೇಕ ವಿಘ್ನದಿಂದ ನಾಶವಾಗಲಿರುವುದೋ
ಹರಿಯ ಜಪಿಸು ಮರುಕ್ಷಣ ದೋಣಿ ದಡ ಸೇರುವುದು
ಅನೇಕ ಯೋನಿ ಜನ್ಮವೆತ್ತಿ ಸತ್ತು ಮತ್ತೆ ಜನಿಸಲು
ದೊರೆವುದಾಗ ವಿಶ್ರಾಂತಿ ಹರಿ ನಾಮ ಜಪಿಸಲು

ಹಉ ಮೈಲಾ ಮಲು ಕಬ್‌ಹು ನ ಧೋವೈ
ಹರಿ ಕಾ ನಾವ್ ಕೋಟಿ ಪಾಪ್ ಖೋವೈ
ಐಸಾ ನಾಮ್ ಜಪ್‌ಹು ಮನ್ ರಂಗಿ ॥ 3 ॥
ನಾನಕ್ ಪಾಯಿ ಸಾಧ್ ಕೈ ಸಂಗಿ

2/4

ಜಿಹ್ ಮಾರಗ್ ಕೇ ಗನೇ ಜಾಹಿ ನ ಕೋಸಾ
ಹರಿ ಕಾ ನಾವ್ ವಹಾ ಸಂಗಿ ತೋಸಾ
ಜಿಹ್ ಪೈಡೈ ಮಹಾ ಅಂಧ್ ಗುಬಾರಾ
ಹರಿ ಕಾ ನಾವ್ ಸಂಗಿ ಉಜಿಯಾರಾ
ಜಹಾ ಪಂಥಿ ತೇರಾ ಕೋಇನ್ ಸಿಞಾನೂ
ಹರಿ ಕಾ ನಾವ್ ತಹ್ ನಾಲಿ ಪಛಾನು
ಜಹ್ ಮಹಾ ಭಯಾನ್ ತಪ್ತಿ ಬಹು ಘಾಮ್
ತಹ್ ಹರಿ ಕೇ ನಾವ್ ಕೀ ತುಮ್ ಊಪರಿ ಛಾಮ್
ಜಹಾ ತ್ರಿಖಾಮನ್ ತುಝ್ ಆಕರ್‌ಖೈ
ತಹ್ ನಾನಕ್ ಹರಿ ಹರಿ ಅಂಮ್ರಿತ್ ಬರ್‌ಖೈ ॥ 4 ॥

2/5

ಭಗತ್ ಜನಾ ಕೀ ಬರ್‌ತನಿ ನಾಮ್
ಸಂತ್ ಜನಾ ಕೈ ಮನಿ ಬಿಸ್ರಾಮ್
ಹರಿ ಕಾ ನಾಮ್ ದಾಸ್ ಕೀ ಓಟ್
ಹರಿ ಕೈ ನಾಮ್ ಉಧರೇ ಜನ್ ಕೋಟಿ
ಹರಿ ಜಸು ಕರತ್ ಸಂತ್ ದಿನ್‌ರಾತಿ
ಹರಿ ಹರಿ ಅಉಖಧು ಸಾಧ್ ಕಮಾತಿ
ಹರಿ ಜನ್ ಕೈ ಹರಿ ನಾಮು ನಿಧಾನು
ಪಾರ್‌ಬ್ರಹ್‌ಮಿ ಜನ್ ಕೀನೋ ದಾನ್
ಮನ್ ತನ್ ರಂಗಿ ರತೇ ರಂಗ್ ಏಕೈ
ನಾನಕ್ ಜನ್ ಕೈ ಬಿರತಿ ಬಿಬೇಕೈ ॥ 5 ॥

ಕೊಳಕು ಅಹಂ ಕೊಳೆಯನೆಂದೂ ಸ್ವಚ್ಛಗೊಳಿಸದಿದ್ದರೂ
ಕೋಟಿ ಪಾಪಗಳನು ಹರಿಯ ನಾಮ ನಾಶಗೊಳಿಪುದು
ಜಪಿಸು ಮನವೆ ಹರಿ ನಾಮ ಇನಿತು ಸಂತೋಷದಿಂದ
ಸಿಗುವುದದು ನಾನಕನೆ ಸಾಧು ಸಮಾಗಮಗಳಿಂದ ॥ 3 ॥

2/4

ಯಾವ ದಾರಿ ದೂರವೋ, ಎಣಿಕೆಗೂ ಅಪಾರವೋ
ಅಲ್ಲಿ ಹರಿ ನಾಮವೇ ಭುಂಜಿಸಲುಪಹಾರವು
ಯಾವ ಹಾದಿಯಲ್ಲಿದೆಯೋ ಕರಾಳ ಕಗ್ಗತ್ತಲು
ಅಲ್ಲಿ ಹರಿ ನಾಮವೇ ಪರಂಜ್ಯೋತಿ ಸುತ್ತಲೂ
ಯಾವ ಹಾದಿಯಲ್ಲಿ ನಿನ್ನ ಪರಿಚಯವೇ ಇಲ್ಲವೋ
ಅಲ್ಲಿ ಹರಿ ನಾಮವೇ ಪರಿಚಯವೆಲ್ಲವೂ
ಎಲ್ಲಿ ಮಹಾ ಭಯದ ಧಗೆ ಕುದಿಯುತಿರುವುದೋ
ಅಲ್ಲಿ ಹರಿ ನಾಮದ ನೆರಳು ಸಹ ಇರುವುದು
ಎಲ್ಲಿ ಮನದ ದಾಹವು ನಿನ್ನನಾಕರ್ಶಿಸುವುದೋ
ಅಲ್ಲಿ ಹರಿಯು ನಾನಕನೆ ಹರಿಯಮೃತಗರೆಸುವುದು ॥ 4 ॥

2/5

ಭಕ್ತ ಜನ ಪ್ರಯೋಗವೇ ಹರಿಯ ನಾಮವು
ಸಂತ ಜನರ ಮನದಲೇ ಹರಿ ವಿರಾಮವು
ಹರಿನಾಮವಿರುವುದು ಹರಿದಾಸರ ತುಟಿಯಲಿ
ಹರಿ ನಾಮ ಕಾರಣ ಕೋಟಿ ಜನೋದ್ಧಾರದಲಿ
ಹರಿಯ ಯಶವನಾಡುತ್ತ ಸಂತರೆಲ್ಲ ದಿನ ದಿನ
ಹರಿ ನಾಮದೌಷಧವ ಪಡೆಯುವರು ಸಾಧು ಜನ
ಹರಿಭಕ್ತರೆಲ್ಲರಿಗೂ ಹರಿಯ ನಾಮ ಹರಿಧನ
ಪರಬ್ರಹ್ಮ ಜನರಿಗೆ ಸಲುವ ದಾನ ಹರಿಧನ
ಚಿತ್ತ ದೇಹ ಬಣ್ಣವಾಗಿ ಒಂದೇ ಬಣ್ಣವಾಗಿದೆ
ನಾನಕನೆ ! ಆತನ ಗುರಿ ವಿರಕ್ತ ಜ್ಞಾನವಾಗಿದೆ ॥ 5 ॥

 

2/6

ಹರಿ ಕಾ ನಾಮ್ ಜನ್ ಕಉ ಮುಕ್‌ತಿ ಜುಗ್‌ತಿ
ಹರಿ ಕೈ ನಾಮಿ ಜನ್ ಕಉ ತ್ರಿಪ್‌ತಿ ಭುಗ್‌ತಿ
ಹರಿ ಕಾ ನಾಮ್ ಜನ್ ಕಾ ರೂಪ್ ರಂಗ್
ಹರಿ ನಾಮ್ ಜಪ್‌ತ್ ಕಬ್ ಪರೈ ನ ಭಂಗ್
ಹರಿ ಕಾ ನಾಮ್ ಜನ್ ಕೀ ವಡಿಆಈ
ಹರಿ ಕೈ ನಾಮಿ ಜನ್ ಸೋಭಾ ಪಾಈ
ಹರಿ ಕಾ ನಾಮ್ ಜನ್ ಕಉ ಭೋಗ್ ಜೋಗ್
ಹರಿ ನಾಮ್ ಜಪತ್ ಕಛು ನಾಹಿ ಬಿಓಗ್
ಜನ್ ರಾತಾ ಹರಿ ನಾಮ್ ಕೀ ಸೇವಾ
ನಾನಕ್ ಪೂಜೈ ಹರಿ ಹರಿ ದೇವಾ ॥ 6 ॥

2/7

ಹರಿ ಹರಿ ಜನ್ ಕೈ ಮಾಲ್ ಖಜೀನಾ
ಹರಿ ಧನ್ ಜನ್ ಕಉ ಆಪಿ ಪ್ರಭಿ ದೀನಾ
ಹರಿ ಹರಿ ಜನ್ ಕೈ ಓಟ್ ಸತಾಣೀ
ಹರಿ ಪ್ರತಾಪೀ ಜನ್ ಅವ್‌ರ್ ನ ಜಾಣೀ
ಓತಿ ಪೋತಿ ಜನ್ ಹರಿ ರಸಿ ರಾತೆ
ಸುನಿ ಸಮಾಧಿ ನಾಮ್ ರಸ್ ಮಾತೆ
ಆಠ್ ಪಹರ್ ಜನ್ ಹರಿ ಹರಿ ಜಪೈ
ಹರಿ ಕಾ ಭಗತ್ ಪ್ರಗಟ್ ನಹೀ ಛಪೈ
ಹರೀ ಕಿ ಭಗತಿ ಮುಕ್‌ತಿ ಬಹು ಕರೇ
ನಾನಕ್ ಜನ್ ಸಂಗಿ ಕೇತೇ ತರೇ ॥ 7 ॥

2/8

ಪಾರ್‌ಜಾತ್ ಇಹ್ ಹರಿ ಕೋ ನಾಮ್
ಕಾಮ್‌ಧೇನ್ ಹರಿ ಹರಿ ಗುಣ್ ಗಾಮ್

2/6

ಹರಿ ನಾಮ ಭಕ್ತರ ಮುಕ್ತಿಗಿರುವ ಯುಕ್ತಿ
ಹರಿ ನಾಮ ಭಕ್ತರಿಗೆ ಲಭಿಸುವಂಥ ತೃಪ್ತಿ
ಹರಿ ನಾಮ ಭಕ್ತರ ರೂಪಾತಿರಂಗ
ಹರಿ ನಾಮ ಜಪಿಸುವರಿಗಿರದಾವ ಭಂಗ
ಹರಿ ನಾಮ ಭಕ್ತರಿಗೆ ಇರುವಂಥ ಹಿರಿತನ
ಹರಿ ನಾಮ ಭಕ್ತರಿಗೆ ಶೋಭಾಯಮಾನ
ಹರಿ ನಾಮ ಭಕ್ತರಿಗೆ ಭೋಗಾತಿಯೋಗ
ಹರಿ ನಾಮ ಜಪಿಸುವರಿಗಿರದೈ ವಿಯೋಗ
ಹರಿ ನಾಮ ಬೆಳಗುವುದು ಮನ ಸೇವೆಯಲ್ಲಿ
ನಾನಕನೆ ಹರಿ ನಾಮ ಸದಾ ಹರಿ ಪೂಜೆಯಲ್ಲಿ ॥ 6 ॥

2/7

ಹರಿ ಹರಿಭಕ್ತರ ಧನ ನಿಧಿಕೋಶ
ಹರಿಭಕ್ತರಿಗೆ ನಿಧಿ ನೀಡಿಹನೀಶ
ಹರಿ ಜನರಿಗೆ ಹರಿ ಅತಿಬಲದಾಶ್ರಯ
ಹರಿ ಪ್ರತಾಪದವ ಇತರರನರಿಯ
ಓತ ಪ್ರೋತ ಜನ ಹರಿರಸದೊಳು ಮಗ್ನ
ಶೂನ್ಯ ಸಮಾಧಿಯ ನಾಮರಸ ಚೆನ್ನ
ಎಂಟೂ ಪ್ರಹರ ಹರಿ ಹರಿ ಜಪಿಸುವರು
ಹರಿ ಭಕ್ತರು ಅವಿಯರು, ಪ್ರಕಟವಾಗುವರು
ಹರಿ ಭಕ್ತಿಯಿಂದ ಮುಕ್ತಿ ಪಡೆವರೆನಿತೋ
ನಾನಕನ ಜನರೊಡನೆ ತೇಲಿ ಹೋದವರೆನಿತೋ ॥ 7 ॥

2/8

ಪಾರಿಜಾತ ಕಲ್ಪವೃಕ್ಷ ಹರಿಯ ನಾಮವು
ಕಾಮಧೇನು ಹರಿಗುಣ ಗಾನ ಧಾಮವು

ಸಭ್ ತೇ ಊತಮ್ ಹರಿ ಕೀ ಕಥಾ
ನಾಮ್ ಸುನತ್ ದರ್‌ದ್ ದುಖ್ ಲಥಾ
ನಾಮ್ ಕೀ ಮಹಿಮಾ ಸಂತ್ ರಿದ್‌ವಸೈ
ಸಂತ್ ಪ್ರತಾಪಿ ದುರ್‌ತು ಸಭು ನಸೈ
ಸಂತ್ ಕಾ ಸಂಗ್ ವಡ್‌ಭಾಗೀ ಪಾಈಐ
ಸಂತ್ ಕೀ ಸೇವಾ ನಾಮ್ ಧ್ಯಾಇಐ
ನಾಮು ತುಲೀ ಕಛು ಅವ್‌ರು ನ ಹೋಇ
ನಾನಕ್ ಗುರ್‌ಮುಖಿ ನಾಮು ಪಾವೈ ಜನುಕೋಇ ॥ 8 ॥

ಸಲೋಕು :

ಬಹು ಸಾಸ್‌ತ್ರ ಬಹು ಸ್ಮೃತಿ
ಪೇಖೇ ಸರ್‌ಬ್ ಢಢೋಲಿ
ಪೂಜಸಿ ನಾಹೀ ಹರಿ ಹರೆ
ನಾನಕ್ ನಾಮ್ ಅಮೋಲ್

ಅಸಟ್‌ಪದೀ—3

ಜಪ್ ತಪ್ ಜ್ಞಾನ್ ಸಭೀ ಧ್ಯಾನ್
ಖಟ್ ಸಾಸ್‌ತ್ರ ಸ್ಮೃತಿ ವ್ಯಾಖ್ಯಾನ್
ಜೋಗ್ ಅಭ್ಯಾಸ್ ಕರಮ್ ಧರಮ್ ಕ್ರಿಯಾ
ಸಗ್‌ಲ್ ತಿಆಗಿ ಬನ್‌ಮಧೇ ಫಿರಿಆ
ಅನಿಕ್ ಪ್ರಕಾರ್ ಕೀಏ ಬಹು ಜತ್‌ನಾ
ಪುಂನ್ ದಾನ್ ಹೋಮೇ ಬಹು ರತ್‌ನಾ
ಸರೀರ್ ಕಟಾಏ ಹೋಮೈ ಕರಿ ರಾತೀ
ಬ್ರತ್ ನೇಮ್ ಕರೈ ಬಹು ಭಾತೀ
ನಹೀ ತುಲಿ ರಾಮ್ ನಾಮ್ ಬಿಚಾರ್
ನಾನಕ್ ಗುರ್‌ಮುಖಿ ನಾಮ್ ಜಪಿಯೆ ಇಕ್‌ಬಾರ್ ॥ 1 ॥

ಎಲ್ಲಕ್ಕಿಂತ ಉತ್ತಮ ಕಥೆಯೆ ಹರಿಕಥೆ
ನಾಮ ಕೇಳಿ ದೂರವೆಲ್ಲ ಪೀಡೆಯೆಲ್ಲದಾವ್ಯಥೆ
ನಾಮ ಮಹಿಮೆ ಸಂತರ ಹೃದಯ ವಾಸಿನಿ
ಸಂತರ ಪ್ರತಾಪವೋ ದುರಂತ ನಾಶಿನಿ
ಸಂತರ ಸಂಗ ಅತಿ ಭಾಗ್ಯದಿಂದ ಲಭ್ಯ
ಸಂತರ ಸೇವೆಯಿಂದ ನಾಮ ಸ್ಮರಣೆ ಲಭ್ಯ
ನಾಮದ ತುಲನೆಗೆಂದು ಮತ್ತೊಂದು ದೊರಕದು
ನಾನಕನೆ ಗುರುಮುಖದ ನಾಮ ಲಭ್ಯ ಕೆಲರದು ॥ 8 ॥

ಶ್ಲೋಕ :

ಸಕಲ ಶಾಸ್ತ್ರ ಸ್ಮೃತಿಯ ಹುಡುಕಿ
ನೋಡಿ ಆಯಿತೆಲ್ಲ
ಅತ್ಯಮೂಲ್ಯ ಹರಿನಾಮ
ನಾನಕ, ಅದಕೆ ಸಾಟಿ ಇಲ್ಲ

ಅಷ್ಟಪದಿ—3

ಜಪತಪಾದಿ ಜ್ಞಾನಗಳ ಧ್ಯಾನ ಗೈದರೂ
ಷಡ್‌ಶಾಸ್ತ್ರ ಸ್ಮೃತಿಗಳ ವ್ಯಾಖ್ಯಾನಿಸಿದರೂ
ಯೋಗಾಭ್ಯಾಸ ಧರ್ಮಕರ್ಮಗಳನು ಮಾಡುತಿದ್ದರೂ
ಸರ್ವ ತ್ಯಾಗಗೈದು ಕಾಡ ನಡುವೆ ಅಲೆದರೂ
ಬಹು ಪ್ರಕಾರ ಯತ್ನಗಳ ಪ್ರಯತ್ನದಲ್ಲಿದ್ದರೂ
ರತ್ನಗಳ ಪುಣ್ಯದಾನ ಹೋಮ ಹವನಗೈದರೂ
ದೇಹವನ್ನು ತುಂಡು ಮಾಡಿ ಹವನದಲ್ಲಿ ಹಾಕಿದರೂ
ವಿವಿಧ ರೀತಿ ನೇಮ ನಿಯಮ ವ್ರತವನಾಚರಿಸಿದರೂ
ರಾಮ ನಾಮ ಸಂಗತಿ ತುಲನೆಗಾಗಲಾರದು
ನಾನಕನೆ ! ಗುರುಮುಖ ಏಕನಾಮ ಜಪದ ಮುಂದು ॥ 1 ॥

3/2

ನವ್ ಖಂಡ್ ಪೃಥ್ವೀ ಫಿರೈ ಚಿರು ಜೀವೈ
ಮಹಾ ಉದಾಸ್ ತಪೀ ಸರ್ ಥೀವೈ
ಅಗ್‌ನಿ ಮೊಹಿಹೋಮತ್ ಪ್ರಾನ್
ಕನಕ್ ಅಸವ್ ಹೈವರ್ ಭೂಮಿ ದಾನ್
ನಿಉಲಿ ಕರ್‌ಮ್ ಕರೈ ಬಹು ಆಸಾನ್
ಜೈನ್ ಮಾರ್ಗ್ ಸಂಜಮ್ ಅತಿ ಸಾಧನ್
ನಿಮಖ್ ನಿಮಖ್ ಕರಿ ಸರೀರ್ ಕಟಾವೈ
ತಉ ಭೀ ಹಉಮೈ ಮೈಲ್ ನ ಜಾವೈ
ಹರಿ ಕೆ ನಾಮ್ ಸಮ್‌ಸರಿ ಕಛು ನಾಹಿ
ನಾನಕ್ ಗುರ್‌ಮುಖಿ ನಾಮ್ ಜಪತ್ ಗತಿ ಪಾಹಿ ॥ 2 ॥

3/3

ಮನ್ ಕಾಮ್‌ನಾ ತೀರ್‌ಥ್ ದೇಹ್ ಛುಟೈ
ಗರ್‌ಬ್ ಗುಮಾನ್ ನ ಮನ್ ತೇ ಹುಟೈ
ಸೋಚ್ ಕರೈ ದಿನ್‌ಸು ಅರು ರಾತಿ
ಮನ್ ಕೀ ಮೈಲ್ ನ ತನ್ ತೇ ಜಾತಿ
ಇಸ್ ದೇಹೀ ಕೋ ಬಹು ಸಾಧ್‌ನಾ ಕರೈ
ಮನ್ ತೇ ಕಬ್‌ಹೂ ನ ಬಿಖಿಆ ಟರೈ
ಜಲಿ ಧೋವೈ ಬಹು ದೇಹ್ ಅನೀತಿ
ಸುಧ್ ಕಹಾ ಹೋಇ ಕಾಚಿ ಭೀತಿ
ಮನ್ ಹರಿ ಕೇ ನಾಮ್ ಕೀ ಮಹಿಮಾ ಊಚ್
ನಾನಕ್ ನಾಮಿ ಉಧ್‌ರೆ ಪತಿತ್ ಬಹು ಮೂಚ್ ॥ 3 ॥

3/4

ಬಹುತ್ ಸಿಆಣಪ್ ಜಮ್‌ಕಾ ಭಯ್ ವ್ಯಾಪೈ
ಅನಿಕ್ ಜತನ್ ಕರಿ ತ್ರಿಸ್ನ್ ನ ಧ್ರಾಪೈ

3/2

ನವಖಂಡ ಪೃಥ್ವಿಯನು ಚಿರಕಾಲ ತಿರುಗಿದರೂ
ದಾಸಾನುದಾಸ ಮಹಾ ತಪಸ್ವಿಯಾಗಿ ಹೋದರೂ
  ಪ್ರಾಣವನಗ್ನಿಕುಂಡದಲ್ಲಿ ಹೋಮ ಮಾಡಿದರೂ
  ಕನಕಾಶ್ವ ಗಜ ಭೂಮಿಗಳ ದಾನ ಮಾಡಿದರೂ
ನೇತಿ ಇತಿ ಕರ್ಮಗಳ ಸುಲಭದಿಂದ ಗೈದರೂ
ಜೈನ ಮಾರ್ಗ ಸಂಯಮದ ಸಾಧನೆಯನೆಸಗಿದರೂ
  ಖಂಡತುಂಡವಾಗಿ ದೇಹ ಕತ್ತರಿಸಿ ಎಸೆದರೂ
  ಹೋಗದಹಂಕಾರದಾ ಕೊಳೆ ಎಷ್ಟು ಕಷ್ಟಪಟ್ಟರೂ
ಹರಿ ನಾಮದ ಸಮಸರಿ ಮತ್ತೆ ಬೇರೊಂದಿಲ್ಲ
ನಾನಕ ! ಗುರುಮುಖ ನಾಮ ಜಪ ಗತಿಯೆಲ್ಲ ॥ 2 ॥

3/3

ಮನ ಬಯಸಿದ ತೀರ್ಥಸ್ನಾನದಲಿ ಪ್ರಾಣ ಬಿಟ್ಟರೂ
ಗರ್ವ ಅಹಂಕಾರ ಮನದಿ ತೊರೆದು ಹೋಗದು
  ದಿನವು ಮತ್ತು ರಾತ್ರಿಯೆಲ್ಲ ಎಷ್ಟು ಚಿಂತನೆಗೈದರೂ
  ತನುವಿನಿಂದ ಮನದ ಕೊಳೆಯು ಹೋಗಲಾರದು
ದೇಹಕೆಂದು ಸಾಧನೆಗಳೆಷ್ಟು ಗೈದರೂ
ಮನದಿಂದ ವಿಷವದೆಂದೂ ದೂರವಾಗದು
  ಅನೀತಿಯಿಂದ ದೇಹವನ್ನು ಎಷ್ಟು ತೊಳೆದರೂ
  ಹಸಿಯು ಗೋಡೆ ಎಲ್ಲಾಗುವುದು ಪರಿಶುದ್ಧವಾದರೂ
ಮನವೆ ನೀ ತಿಳಿ ಹರಿ ನಾಮದ ಮಹಿಮೆ ಉತ್ತಮ
ನಾನಕನೆ ! ಅನೇಕ ಪಾಪಿ ನೀಚರನ್ನು ಉದ್ಧರಿಸಿದೆ ಹರಿಯನಾಮ
॥ 3 ॥

3/4

ಯಮನ ಭಯವು ವ್ಯಾಪಕ ಅತಿ ಕುಶಲ ರೀತಿಯದು
ವಿವಿಧ ಯತ್ನದಿಂದಲೂ ತೃಷ್ಣೆ ಅಡಗದು

ಭೇಖ್ ಅನೇಕ್ ಅಗ್‌ನಿ ನಹೀ ಬುಝ್ಯೆ
ಕೋಟಿ ಉಪಾಯ್ ದರ್‌ಗಹ್ ನಹೀ ಸಿಝ್ಯೆ
ಛೂಟ್‌ಸಿ ನಾಹೀ ಊಭ್ ಪಇಆಲಿ
ಮೋಹಿ ಬಿಆಪ್‌ಹಿ ಮಾಯಾ ಜಾಲಿ
ಅವ್‌ರ್ ಕರ್‌ತೂತಿ ಸಗ್‌ಲೀ ಜಮು ಡಾನ್ಯೆ
ಗೋವಿಂದ್ ಭಜನ್ ಬಿನು ತಿಲು ನಹೀ ಮಾನ್ಯೆ
ಹರಿ ಕಾ ನಾಮು ಜಪತ್ ದುಖ್ ಜಾಇ
ನಾನಕ್ ಬೋಲ್ಯೆ ಸಹ್‌ಜಿ ಸುಭಾಇ ॥ 4 ॥

3/5

ಚಾರಿ ಪದಾರಥ್ ಜೇ ಕೋ ಮಾಗ್ಯೆ
ಸಾಧ್ ಜನಾ ಕೀ ಸೇವಾ ಲಾಗ್ಯೆ
ಜೇಕೋ ಆಪುನಾ ದುಖ್ ಮಿಟಾವ್ಯೆ
ಹರಿ ಹರಿ ನಾಮ್ ರಿದ್ಯೆ ಸದ್ ಗಾವ್ಯೆ
ಜೇಕೋ ಅಪ್‌ನೀ ಸೋಭಾ ಲೋರ್ಯೆ
ಸಾಧ್ ಸಂಗಿ ಇಹ್ ಹಉಮ್ಯೆ ಛೋರ್ಯೆ
ಜೇಕೋ ಜನ್‌ಮ್ ಮರಣ್ ತೇ ಡರ್ಯೆ
ಸಾಧ್ ಜನಾ ಕೀ ಸರ್‌ನೀ ಪರ್ಯೆ
ಜಿಸ್ ಜನ್ ಕೊ ಪ್ರಭ್ ದರ್‌ಸ್ ಪ್ಯಾಸಾ
ನಾನಕ್ ತಾಕ್ಯೆ ಬಲಿ ಬಲಿ ಜಾಸಾ ॥ 5 ॥

3/6

ಸಗಲ್ ಪುರ್‌ಖ್ ಮಹಿ ಪುರಖ್ ಪ್ರಧಾನ್
ಸಾಧ್ ಸಂಗಿ ಜಾ ಕಾ ಮಿಟ್ಯೆ ಅಭಿಮಾನ್
ಆಪ್‌ಸ್ ಕೊ ಜೋ ಜಾಣ್ಯೆ ನೀಚಾ
ಸೋ ಉಸೆ ಗನೀಐ ಸಭ್ ತೇ ಊಚಾ
ಜಾ ಕಾ ಮನ್ ಹೋಇ ಸಗಲ್ ಕೀ ರೀನಾ
ಹರಿ ಹರಿ ನಾಮ್ ತಿನಿ ಘಟಿ ಚೀನಾ

ಅನೇಕ ವೇಷದಿಂದಲೂ ಅಗ್ನಿ ಆರದು
ಕೋಟಿ ಉಪಾಯಗೈದರೂ ದಾರಿ ತೋರದು
ಗಗನ ಭೂತಳದೊಳೆಲ್ಲ ಗತಿಯೆ ದೊರಕದು
ಮೋಹ ಮಾಯೆ ಜಗದೊಳೆಲ್ಲ ವ್ಯಾಪಿಸಿರುವುದು
ಮತ್ತಿತರ ಕ್ರಿಯೆಗೆ ಯಮನ ದಂಡವಿರುವುದು
ಗೋವಿಂದನ ಭಜನೆ ಇರದೆ ಎಲ್ಲೂ ಏನೂ ಆಗದು
ಹರಿಯ ನಾಮ ಜಪಿಸಲು ದುಃಖ ದೂರವಾಗುವುದು
ನಾನಕನೆನುವ, ಸಹಜತೆಯೆ ನಾಮ ಸ್ಮರಣೆಗೈಯುವುದು ॥ 4 ॥

3/5

ನಾಲ್ಕೂ ಬಗೆಯ ವಸ್ತುಗಳ ಯಾರೇ ಬೇಡಲಿ
ಸಾಧು ಜನರ ಸೇವೆಯಲ್ಲಿ ಅವರು ತೊಡಗಲಿ
ಯಾರೇ ತಮ್ಮ ದುಃಖವನ್ನು ದೂರಾಗಿಸಲಿಚ್ಛಿಸಲಿ
ತಮ್ಮ ಹೃದಯದಲ್ಲಿ ಸದಾ ಹರಿಯ ನಾಮ ಹಾಡಲಿ
ಯಾರೇ ತಮ್ಮ ಶೋಭೆಯನ್ನು ಹೆಚ್ಚಿಸಲಿಚ್ಛಿಸಲಿ
ಸಾಧು ಸಂತ ಸಂಗದಿಂದ ಅಹಂಕಾರವನ್ನು ಬಿಡಲಿ
ಯಾರೇ ಜನನ ಮರಣಕೆಂದು ಅತಿಯಾಗಿ ಹೆದರದಿರಲಿ
ಸಾಧು ಜನರ ಚರಣದಲ್ಲಿ ಅವರು ಬೀಳಲಿ
ಹರಿ ದರ್ಶನದ ದಾಹವಿರುವನಾವನಾದರೂ
ನಾನಕನೇ ತನ್ನನವಗೆ ಧಾರೆ ಎರೆದುಕೊಳುವನು ॥ 5 ॥

3/6

ಪುರುಷರಲ್ಲಿ ಪುರುಷ ಪ್ರಧಾನಿಯಾಗಿರುವನು
ಸಾಧು ಸಂಗದಿಂದಲೇ ನಿರಭಿಮಾನಿಯಾಗಿರುವನು
ತಾನೇ ತಾನು ತನ್ನನು ಕೀಳೆಂದೆನುವನು
ಇತರರಿಂದ ಮೇಲೆಂದು ತಿಳಿ ಅವನನ್ನು
ಯಾರ ಮನ ಎಲ್ಲರ ಧೂಳಾಗಿಬಿಡುವುದೋ
ಅರಿವನವನು ಘಟ ಘಟದಲೂ ಹರಿ ನಾಮವನು

ಮನ್ ಅಪ್‌ನೇ ತೇ ಬುರಾ ಮಿಟಾನಾ
ಪೇಖೈ ಸಗಲ್ ಸ್ರಿಸ್‌ಟಿ ಸಾಜ್‌ನಾ
ಸುಖ್ ದುಃಖ್ ಜನ್ ಸಮ್ ದ್ರಿಸ್‌ಟೇತಾ
ನಾನಕ್ ಪಾಪ್ ಪುಂನ್ ನಹೀ ಲೇಪಾ ॥ 6 ॥

3/7

ನಿರ್‌ಧನ್ ಕೊ ಧನ್ ತೇರೊ ನಾಉ
ನಿಥಾವೆ ಕಾ ನಾಮ್ ತೇರೋಥಾಉ
ನಿಮಾನೆ ಕಉ ಪ್ರಭ್ ತೇರೊ ಮಾನ್
ಸಗಲ್ ಘಟಾ ಕಉ ದೇವ್‌ಹು ದಾನ್
ಕರನ್ ಕರಾವನ್‌ಹಾರ್ ಸ್ವಾಮಿ
ಸಗಲ್ ಘಟಾ ಕೆ ಅಂತರ್ ಜಾಮಿ
ಅಪನೀ ಗತಿ ಮಿತಿ ಜಾನ್‌ಹು ಆಪೆ
ಆಪನ್ ಸಂಗಿ ಆಪಿ ಪ್ರಭ್ ರಾತೆ
ತಮರೀ ಉಸ್‌ತತಿ ತುಮ್ ತೆ ಹೋಇ
ನಾನಕ್ ಅವರ್ ನ ಜಾನಸಿ ಕೋಇ ॥ 7 ॥

3/8

ಸರ್‌ಬ್ ಧರ್‌ಮ್ ಮೆ ಸ್ರೇಸ್‌ಟ್ ಧರ್‌ಮ್
ಹರಿ ಕೋ ನಾಮು ಜಪಿ ನಿರ್‌ಮಲ್ ಕರ್‌ಮ್
ಸಗಲ್ ಕ್ರಿಯಾ ಮಹಿ ಊತ್ತಮ್ ಕ್ರಿಯಾ
ಸಾಧ್ ಸಂಗಿ ದುರ್‌ಮತಿ ಮಲ್ ಹಿರಿಆ
ಸಗಲ್ ಉದಮ್ ಮಹಿ ಉದಮ್ ಭಲಾ
ಹರಿ ಕಾ ನಾಮ್ ಜಪ್‌ಹು ಜೀಅ ಸದಾ
ಸಗಲ್ ಬಾನೀ ಮಹಿ ಅಂಮ್ರಿತ್ ಬಾನಿ
ಹರಿ ಕೋ ಜಸು ಸುನಿ ರಸನ್ ಬಖಾನೀ
ಸಗಲ್ ಥಾನ್ ತೆ ಓಹು ಊತಮ್ ಥಾನ್
ನಾನಕ್ ಜಿಹ್ ಘಟಿ ವಸೈ ಹರಿ ನಾಮ್ ॥ 8 ॥

ಮನದಿಂದ ದುರಿತಗಳ ತೊಡೆದೋಡಿಸಿರುವನು
ಪ್ರೇಮಮಯೀ ಸರ್ವಸೃಷ್ಟಿ ಈಕ್ಷಿಸುವನು
ಜನರ ಸುಖ ದುಃಖಗಳ ಸಮದೃಷ್ಟಿಸುವವನು
ನಾನಕನೆ ಪಾಪ ಪುಣ್ಯ ಮುಟ್ಟದವನು ॥6॥

3/7

ನಿರ್ಧನಿಕರ ಧನ ನಿನ್ನಯ ನಾಮ
ನಿನ್ನ ನಾಮವೇ ನಿಸ್ಥಾನೀಕರ ಧಾಮ
ಮಾನಹೀನರಿಗೂ ಪ್ರಭು ನಿನ್ನದೆ ಮಾನ
ಸಕಲ ಘಟಗಳಿಗೂ ಕೊಡು ನೀ ದಾನ
ಮಾಡುವನೆ ಮಾಡಿಸುವವನೆ ಸ್ವಾಮಿ
ಸರ್ವ ಘಟಗಳ ಅಂತರ್ಯಾಮಿ
ನಿನ್ನಯ ಗತಿ ಮಿತಿ ತಿಳಿದಿಹೆ ನೀನೇ
ನಿನ್ನೊಡನಾಡಿಹೆ ಪ್ರಭು ಓಕಳಿ ನೀನೇ
ಸೃಷ್ಟಿ ಸ್ಥಿತಿ ಲಯಗಳು ನಿನ್ನಿಂದ
ನಾನಕ ಅರಿವಾಗದಿದು ಬೇರಾರಿಂದ ॥7॥

3/8

ಸರ್ವ ಧರ್ಮಗಳಲು ಅತಿ ಶ್ರೇಷ್ಠ ಧರ್ಮವು
ಹರಿ ನಾಮ ಜಪಿಸುವುದೆ ಅತಿ ನಿರ್ಮಲ ಕರ್ಮವು
ಕ್ರಿಯೆಯೊಳೆಲ್ಲ ಶ್ರೇಷ್ಠ ಕ್ರಿಯೆ ಅತಿ ಉತ್ತಮಕಾರಿಯು
ಸಾಧುಗಳ ಸಂಗ ದುರ್ಬುದ್ಧಿ ಮಲಹಾರಿಯು
ಉದ್ಯಮದೊಳೆಲ್ಲ ಒಳಿತಾದ ಉದ್ಯಮ
ನಿನ್ನ ಮನ ಜಪಿಸುತಿರಲಿ ಸದಾ ಹರಿ ನಾಮ
ನುಡಿಯಲ್ಲಿ ಸುಧಾಮೃತದ ಮುತ್ತು ನುಡಿ ಇರಲಿ
ಹರಿ ಯಶವನಾಲಿಸಿ ಬಣ್ಣಿಸುವ ನಾಲಿಗೆ ಇರಲಿ
ಸಕಲ ಸ್ಥಾನಕಿಂತ ಹರಿ ಸ್ಥಾನವದು ಉತ್ತಮ
ನಾನಕನೆ! ಯಾವ ಘಟದೊಳಿರುವುದೊ ಶ್ರೀಹರಿ ನಾಮ ॥8॥

ಸಲೋಕು :

ನಿರ್‌ಗುನೀಆರ್ ಇಆನಿಆ
ಸೋ ಪ್ರಭು ಸದಾ ಸಮಾಲಿ
ಜಿನಿ ಕೀಆ ತಿಸು ಚೀತಿರಖು
ನಾನಕು ನಿಬಹಿ ನಾಲಿ

ಅಸಟ್‌ಪದೀ—4

ರಮುಈಆ ಕೆ ಗುನ್ ಚೇತಿ ಪ್ರಾನಿ
ಕೌನ್ ಮೂಲ್ ತೆ ಕೌನ್ ದ್ರಿಸ್‌ಟಾನಿ
ಜಿನಿ ತೂ ಸಾಜಿ ಸವಾರಿ ಸಿಗಾರಿಆ
ಗರಭ್ ಅಗನೀ ಮಹಿ ಜಿನ್‌ಹಿ ಉಬಾರಿಆ
ಬಾರ್ ಬಿವಸ್‌ಥಾ ತುಝ್‌ಹಿ ಪಿಆರೈ ದೂಧ್
ಭರಿ ಜೋಬನ್ ಭೋಜನ್ ಸುಖ್ ಸೂಧ್
ಬಿರ್‌ಧಿ ಭಇಆ ಉಪರಿ ಸಾಕ್‌ಸೈನ್
ಮುಖಿ ಅಪಿಆಉ ಬೈಠ್ ಕಉ ದೈನ್
ಇಹು ನಿರ್‌ಗುನು ಗುನ್ ಕಛೂ ನ ಬೂಝೈ
ಬಖ್‌ಸಿ ಲೇಹು ತಉ ನಾನಕ್ ಸೀಝೈ ॥ 1 ॥

4/2

ಜಿಹ್ ಪ್ರಸಾದಿ ಧರ್ ಊಪರಿ ಸುಖಿ ಬಸ್‌ಹಿ
ಸುತ್ ಭ್ರಾತ್ ಮೀತ್ ಬನಿತಾ ಸಂಗಿ ಹಸ್‌ಹಿ
ಜಿಹ್ ಪ್ರಸಾದಿ ಪೀವಹಿ ಸೀತಲ್ ಜಲಾ
ಸುಖದಾಈ ಪವನ್ ಪಾವಕ್ ಅಮುಲಾ
ಜಿಹ್ ಪ್ರಸಾದಿ ಭೋಗಹಿ ಸಭಿ ರಸಾ
ಸಗಲ್ ಸಾಮುಗ್ರೀ ಸಂಗಿ ಸಾಥಿ ಬಸಾ
ದೀನೇ ಹಸತ್ ಪಾವ್ ಕರನ್ ನೇತ್ರ್ ರಸ್‌ನಾ
ತಿಸ್‌ಹಿ ತ್ಯಾಗಿ ಔರ್ ಸಂಗಿ ರಚ್‌ನಾ

ಶ್ಲೋಕ :

ಅರಿವಿರದ ಗುಣಹೀನನೇ
ಸದಾ ಪ್ರಭು ನಿನ್ನೊಡನಿರಲಿ
ರಚಿಸಿದನಾರೋ ನಿನ್ನನ್ನು
ನಾನಕ ನಿನ್ನ ಜೊತೆಗೂಡಿರಲಿ

ಅಷ್ಟಪದಿ—4

ಹೇ ಪ್ರಾಣಿ ! ನೆನೆ ನೀ ರಾಮನ ಗುಣಗಳನು
ನಿನ್ನ ಮೂಲವ ಕಂಡರಿತವನನ್ನು
ನಿನ್ನನೊಪ್ಪಾಗಿಸಿ ಸವರಿ ಶೃಂಗರಿಸಿಹನಾರೋ
ಒಡಲ ಬೆಂಕಿಯಿಂದದನು ಬೇರ್ಪಡಿಸಿಹನಾರೋ
ಬಾಲ್ಯದೊಳು ನಿನಗೆ ಹಾಲನುಣಿಸಿಹನಾರೋ
ತುಂಬು ಯೌವನ ಸುಖದೂಟದಿಂದ ತಣಿಸಿಹನಾರೋ
ವೃದ್ಧಾಪ್ಯದಲಿ ಬಂಧು ಬಳಗಗಳನಿತ್ತವನಾರೋ
ಕುಳಿತಿರುವನ ಬಾಯಿಗೂ ಊಟ ಉಣಿಸಿದವನಾರೋ
ಗುಣಗಳನೇ ಅರಿಯದ ಗುಣಹೀನನು ಯಾರೋ
ಕ್ಷಮಿಸಿದರವರನು ನಾನಕ ಈಜಿ ಹೋಗುವರು ॥ 1 ॥

4/2

ಯಾರ ಕೃಪೆಯಿಂದಿಹುದೋ ಭುವಿಯಲ್ಲಿ ಸುಖವಾಸ
ಸತಿಸುತರು ಬಂಧು ಭಗಿನಿಯರೊಡನೆ ಮನ ಮಂದಹಾಸ
ಯಾರ ಪ್ರವಾಸದಿಂದಿಹುದೋ ಶೀತಲ ಜಲ ಸೇವನೆ
ಸುಂದರ ಸುಖಕರ ಪವನ ಪವಿತ್ರಾಗ್ನಿಯೊಡನೆ
ಯಾರ ಪ್ರಸಾದದಿಂದಿಹುದೋ ಸಕಲ ಭೋಗ ರಸ ರಂಜನೆ
ಸಕಲ ಸಾಮಗ್ರಿಗಳಿಂದ ತುಂಬಿದ ವಾಸದ ಮನೆ
ಕೈಕಾಲು ಕಣ್ಣು ಕಿವಿ ನಾಲಿಗೆಯನಾರು ನೀಡಿರುವನೋ
ಅವನನೇ ತ್ಯಜಿಸಿ ಬೇರೆ ಸಂಗವನಾರು ಮಾಡಿರುವನೋ

ಐಸೆ ದೊಖ್ ಮೂಡ್ ಅಂಧ್ ಬಿಆಪೆ
ನಾನಕ್ ಕಾಢಿ ಲೇಹು ಪ್ರಭ್ ಆಪೆ ॥ 2 ॥

4/3

ಆದಿ ಅಂತ್ ಜೋ ರಾಖನ್ ಹಾರ್
ತಿಸ್ ಸಿಉ ಪ್ರೀತಿ ನ ಕರೈ ಗವಾರ್
ಜಾಕೋ ಸೇವಾ ನವ್‌ನಿಧಿ ಪಾವೈ
ತಾ ಸಿಉ ಮೂಡಾ ಮನ್ ನಹಿ ಲಾವೈ
ಜೋ ಠಾಕುರ್ ಸದ್ ಸದಾ ಹಜೂರೇ
ತಾ ಕೆಉ ಅಂಧಾ ಜಾನತ್ ದೂರೇ
ಜಾ ಕೀ ಟಹಲ್ ಪಾವೈ ದರ್‌ಗಹ್ ಮಾನ್
ತಿಸ್ ಹಿ ಬಿಸಾರೈ ಮುಗಧ್ ಅಜಾನ್
ಸದಾ ಸದಾ ಇಹ್ ಭೂಲನ್ ಹಾರ್
ನಾನಕ್ ರಾಖನ್‌ಹಾರ್ ಅಪಾರ್ ॥ 3 ॥

4/4

ರತನ್ ತಿಆಗಿ ಕಉಡಿ ಸಂಗಿ ರಚೈ
ಸಾಚ್ ಛೋಡಿ ಝೂಠ್ ಸಂಗಿ ಮಚೈ
ಜೋ ಛಡ್‌ನಾ ಸು ಅಸ್‌ಥಿರ್ ಕರಿ ಮಾನೈ
ಜೋ ಹೋವನ್ ಸೋ ದೂರಿ ಪರಾನೈ
ಛೋಡಿ ಜಾಇ ತಿಸ್‌ಕಾ ಸ್ರಮು ಕರೈ
ಸಂಗಿ ಸಹಾಈ ತಿಸು ಪರ್‌ಹರೈ
ಚಂದನ್ ಲೇಪ್ ಉತಾರೈ ಧೋಇ
ಗರ್‌ಧಬ್ ಪ್ರೀತಿ ಭಸಮ್ ಸಂಗ್ ಹೋಇ
ಅಂಧ್ ಕೂಪ್ ಮಹಿ ಪತಿತ್ ಬಿಕ್‌ರಾಲ್
ನಾನಕ್ ಕಾಢಿ ಲೇಹು ಪ್ರಭ್ ದಯಾಲ್ ॥ 4 ॥

ಆತನಿಗೆ ಮೂಢಾಂಧತೆಯು ದುಃಖ ಕವಿಯುವುದು
ನಾನಕನೆ ಪ್ರಭುವಿಗೂ ಆತನ ಸಂಗ ದೂರಾಗುವುದು ॥ 2 ॥

4/3

ಆದಿ ಅಂತದ ರಕ್ಷಕನನ್ನು
ಪ್ರೀತಿಸದ ಕಡು ಮೂರ್ಖನಿವನು
ಯಾರ ಸೇವೆ ನೀಡುವುದೋ ನವ ನಿಧಿ
ಅವನಲ್ಲಿ ಮನವಿಡದೀ ಮೂಢ ಬುದ್ಧಿ
ಯಾವ ದೇವ ಸದಾ ಹತ್ತಿರನಿರುವನೋ
ಅವನನ್ನು ಅಂಥ ದೂರವಿಹನೆನ್ನುವನು
ಯಾವ ಸೇವೆಯಿಂದ ಮಂದಿರದಲಿಹುದೊ ಸನ್ಮಾನ
ತಿಳಿಯದ ಮುಗ್ಧನು ಮರೆಯುವನದನು
ಇವನೆಂದೆಂದೂ ಅವನನು ಮರೆವವನು
ನಾನಕನೇ ! ರಕ್ಷಾ ಪಾಲಕನು—ಅಪಾರನು ॥ 3 ॥

4/4

ರತ್ನವನು ತ್ಯಜಿಸಿ ಕವಡೆಯಾ ಜೊತೆ ಇಹರು
ಸತ್ಯವನು ಸರಿಸಿ ಸುಳ್ಳಿನಾ ಸಂಗವಿಹರು
ಬಿಡಬೇಕಾದುದ ಸ್ಥಿರವೆಂದಿಹರು
ಆಗಬೇಕಾದುದ ಅತಿ ದೂರವೆಂದಿಹರು
ಬಿಟ್ಟು ಹೋಗಬೇಕಾದುದಕೆ ಶ್ರಮ ವಹಿಸುವರು
ಸಂಗ ಸಹಾಯದ ನಾಮವ ಧಿಕ್ಕರಿಸುವರು
ಬಳಿದ ಚಂದನವ ತೊಳೆದು ತೆಗೆಯುವರು
ಸುಟ್ಟ ಬೂದಿಯನು ಕತ್ತೆಯಂತೆ ಪ್ರೀತಿಪರು
ಕುರುಡು ಕೂಪದೊಳಿಹರು ಅತಿ ಘೋರ ಪಾಪಿಗಳು
ಹೊರಗೆಳೆಯೊ ನಾನಕನೇ ಹೇ ಪ್ರಭು ದಯಾಳು ॥ 4 ॥

4/5

ಕರ್‌ತೂತೀ ಪಸೂ ಕೀ ಮಾನಸ್ ಜಾತಿ
ಲೋಕ್ ಪ್ರಚಾರಾ ಕರೈ ದಿನ್ ರಾತಿ
ಬಾಹರಿ ಭೇಖ ಅಂತರಿ ಮಲ್ ಮಾಯಾ
ಛಪ್‌ಸಿ ನಾಹಿ ಕಛು ಕರೈ ಛಪಾಇಆ
ಬಾಹರಿ ಜ್ಞಾನ್ ಧ್ಯಾನ್ ಇಸ್ನಾನ್
ಅಂತರಿ ಬ್ಯಾಪೈ ಲೋಭ್ ಸುಆನ್
ಅಂತರಿ ಅಗ್‌ನಿ ಬಾಹರಿ ತನ್ ಸುಆಹ್
ಗಲಿ ಪಥರ್ ಕೈಸೆ ತರೈ ಅಥಾಹ್
ಜಾಕೈ ಅಂತರಿ ಬಸೈ ಪ್ರಭು ಆಪಿ
ನಾನಕ್ ತೇ ಜನ್ ಸಹಜಿ ಸಮಾತಿ ॥ 5 ॥

4/6

ಸುನಿ ಅಂಧಾ ಕೈಸೆ ಮಾರಗ್ ಪಾವೈ
ಕರ್ ಗಹಿ ಲೇಹು ಓಡಿ ನಿಭ್‌ಹಾವೈ
ಕಹಾ ಬುಝಾರತಿ ಬೂಝೈ ಡೋರಾ
ನಿಸಿ ಕಹೀಯೆ ತಉ ಸಮ್‌ಝೈ ಭೋರಾ
ಕಹಾ ಬಿಸನ್‌ಪದ್ ಗಾವೈ ಗುಂಗ್
ಜತನ್ ಕರೈ ತೊ ಭೀ ಸುರ್‌ಭಂಗ್
ಕಹ್ ಪಿಂಗುಲ್ ಪರ್‌ಬತ್ ಪರ್‌ಭವನ್
ನಹೀ ಹೋತ್ ಊಹ್ ಉಸ್ ಗವನ್
ಕರ್‌ತಾರ್ ಕರುಣಾಮೈ ದೀನ್ ಬೆನತೀ ಕರೈ
ನಾನಕ್ ತುಮರೀ ಕ್ರಿಪಾ ತರೈ ॥ 6 ॥

4/7

ಸಂಗೀ ಸಹಾಯ್ ಸು ಆವೈ ನ ಚೀತಿ
ಜೋ ವೈರಾಈ ತಾ ಸಿಉ ಪ್ರೀತಿ

4/5

ಪಶುವಿನಂತೆ ವ್ಯವಹಾರ ಈ ಮನುಷ್ಯ ಜಾತಿಯು
ಲೋಕ ಪ್ರಚಾರ ಮಾಡುವುದು ದಿವಾ-ರಾತ್ರಿಯೂ
ಹೊರಗೆ ಸಂತರ ವೇಷ ಒಳಗೆ ಮಾಯಾ ಮಲಿನತೆ
ಎಷ್ಟು ಮುಚ್ಚಿದರೂ ಮುಚ್ಚದಂಥದೀ ಕತೆ
ಹೊರಗಿನಿಂದ ನೋಡಲೆಲ್ಲಾ ಜ್ಞಾನ ಧ್ಯಾನ ಸ್ನಾನವು
ಒಳಗಿನಿಂದ ವ್ಯಾಪಕ ಲೋಭ ಭರಿತ ಶ್ವಾನವು
ಒಳಗೆ ವಾಸನಾಗ್ನಿ ಹೊರಗೆ ಶರೀರದಲಂಕಾರ
ಕಲ್ಲು ಕಟ್ಟಿ ಕೊರಳೊಳು ಹೇಗೀಜುವುದು ಸಾಗರ
ಯಾರ ಹೃದಯದಲ್ಲಿ ಪ್ರಭು ತಾನೇ ವಾಸಿಸುವನೋ
ಸಹಜವಾಗಿ ನಾನಕನೇ ಆ ಜನರಲ್ಲಿ ನೆಲೆಸುವನು ॥ 5 ॥

4/6

ಕುರುಡ ಕೇಳಿ ಹಾದಿಯನ್ನು ಹೇಗೆ ಹಿಡಿವನು ?
ಕೈಯ್ಯ ಹಿಡಿದು ಹೋದರೆ ತಾಣವಡೆವನು
ಕಿವುಡ ಹೇಗೆ ತಿಳಿಸದೆ ತಿಳಿಯ ಬಲ್ಲನು ?
ರಾತ್ರಿಯನ್ನು ದಿನವೆಂದು ಅವನು ಅರಿವನು
ಮೂಗ ಹೇಗೆ ವಿಷ್ಣು ಪದವ ಹಾಡಬಲ್ಲನು ?
ಯತ್ನದಿಂದ ಹಾಡಿ ಸ್ವರವ ಭಂಗ ಗೈವನು
ಕುಂಟ ಹೇಗೆ ಪರ್ವತವ ಹತ್ತಬಲ್ಲನು ?
ಊಹೆಯಿಂದ ಪರ್ವತವ ಹತ್ತಲಾರನು
ಕರುಣಾಳು ಕೇಳು ದೀನನ ಆರ್ತನಾದವ
ನಾನಕನೆ ನಿನ್ನ ಕೃಪೆಯಲ್ಲಿ ತೇಲಿಹೋಗುವ ॥ 6 ॥

4/7

ನೆರೆ ನೀಡುವ ಮಿತ್ರರಲಿ ಮನವಿರದವರು
ವೈರಿಯ ಸಖ್ಯತೆ ಬೆಳೆಸುವರವರು

ಬಾಲೂ ಕೆ ಗ್ರಿೇಹ್ ಭೀತರಿ ಬಸೈ
ಅನದ್ ಕೇಲ್ ಮಾಯಾ ರಂಗಿ ರಸೈ
ದ್ರಿಡ್ ಕರಿ ಮಾನ್ಯೆ ಮನ್‌ಹಿ ಪ್ರತೀತಿ
ಕಾಲ್ ನ ಆವ್ಯೆ ಮೂಡೇ ಚೀತಿ
ಬೈರ್ ಬಿರೋಧ್ ಕಾಮ್ ಕ್ರೋಧ್ ಮೋಹ್
ಝೂಠ್ ಬಿಕಾರ್ ಮಹಾ ಲೋಭ್ ಧ್ರೋಹ್
ಇಆಹೂ ಜುಗ್‌ತಿ ಬಿಹಾನೆ ಕಈ ಜನಮ್
ನಾನಕ್ ರಾಖಿ ಲೇಹು ಆಪನ್-ಕರಿ ಕರಮ್ ॥ 7 ।

4/8

ತೂ ಠಾಕುರ್ ತುಮ್ ಪಹಿ ಅರ್‌ದಾಸಿ
ಜೀವ್ ಪಿಂಡ್ ಸಭ್ ತೇರೀ ರಾಸಿ
ತುಮ್ ಮಾತ್ ಪಿತಾ ಹಮ್ ಬಾರಿಕ್ ತೇರೆ
ತುಮರಿ ಕ್ರಿಪಾ ಮಹಿ ಸೂಖ್ ಘನೇರೆ
ಕೋಇಯೀ ನ ಜಾನೇ ತುಮ್‌ರಾ ಅಂತ್
ಊಚೇ ತೇ ಊಚಾ ಭಗವಂತ್
ಸಗಲ್ ಸಮಗ್ರೀ ತುಮರೈ ಸೂತ್ರಿಧಾರೀ
ತುಮ್ ತೇ ಹೋಈ ಸು ಆಗ್ಯಾಕಾರೀ
ತುಮರಿ ಗತಿ ಮಿತಿ ತುಮ್ ಹಿ ಜಾನೀ
ನಾನಕ್ ದಾಸ್ ಸದಾ ಕುರ್‌ಬಾನೀ ॥ 8 ॥

ಸಲೋಕು :

ದೇನ್‌ಹಾರ್ ಪ್ರಭ್ ಛೋಡಿ ಕೈ
ಲಾಗ್‌ಹಿ ಆನ್ ಸುಆಇ
ನಾನಕ್ ಕಹೂ ನ ಸೀಝಈ
ಬಿನು ನಾವೈ ಪತಿ ಜಾಇ

ಮರಳು ಮನೆಯಲಿ ಇರುವವರು
ಮಾಯಾನಂದ ರಸ ಭುಂಜಿಸುವವರು
ದೃಢದಿಂದೊಪ್ಪಿ ಮನ ಈ ಭ್ರಮೆಯನ್ನು
ಮೂಢ ಮನವರಿಯದೆ ಕಾಲ ಬರುವುದನು
ವೈರ ವಿರೋಧ ಕಾಮ ಕ್ರೋಧ ಮೋಹ
ಅಸತ್ಯ ವಿಕಾರ ಅತಿಯಾಸೆ ದ್ರೋಹ
ಈ ಯುಕ್ತಿಗಳಲಿ ಕಳೆದವು ಅನೇಕ ಜನ್ಮ
ಮಾಡಿದ ಕರ್ಮದಿಂ ರಕ್ಷಿಸು ನಾನಕ ನೀನೆಮ್ಮ ॥ 7 ॥

4/8

ನೀನೊಡೆಯ ನಿನ್ನ ನೆರವೇ ಯೋಗ್ಯ
ಜೀವ ದೇಹವೆಲ್ಲ ನಿನ್ನ ಸೌಭಾಗ್ಯ
ನೀನೇ ತಾಯಿ ನೀನೆ ತಂದೆ ನಾವು ನಿನ್ನ ಮಕ್ಕಳು
ಸಕಲ ಸುಖವು ಅಡಗಿದೆ ನಿನ್ನ ಕೃಪೆಯೊಳು
ಅರಿಯರು ಯಾರೂ ನಿನ್ನ ಅಂತ
ಅತಿ ಎತ್ತರಕೂ ಎತ್ತರ ನೀ ಭಗವಂತ
ಸಕಲ ಸಾಮಗ್ರಿಯು ನಿನದೆ ಸೂತ್ರಧಾರಿ
ನಿನ್ನಿಂದಾಗುವುದಕೆ ನೀನಾಜ್ಞಾಕಾರಿ
ನಿನ್ನ ಗತಿ ಮಿತಿ ನೀನೇ ಅರಿತಿರುವೆ
ನಾನಕ ದಾಸ ಸದಾ ಅರ್ಪಿತನಾಗಿರುವೆ ॥ 8 ॥

ಶ್ಲೋಕ :

ನೀಡುವಾತ ಪ್ರಭುವ ತೊರೆದು
ಅನ್ಯ ಸ್ವಾದಗಳಲಿ ಸೇರಿಹರು
ನಾನಕನೆ ! ಅವರೆಂದೂ ಸಫಲರಾಗರು
ಹರಿ ನಾಮದ ಹೊರತು ನಾಶವಾಗುವರು

 

ಅಸಟ್‌ಪದೀ—5

ದಸ್ ವಸ್ತು ಲೇ ಪಾಛೈ ಪಾವೈ
ಏಕ್ ವಸ್ತು ಕಾರನಿ ಬಿಖೋಟಿ ಗವಾವೈ
ಏಕ್ ಭೀ ನ ದೇಇ ದಸ್ ಭೀ ಹಿರಿ ಲೇಇ
ತಉ ಮೂಡಾ ಕಹು ಕಹಾ ಕರೇಇ
ಜಿಸು ಠಾಕುರ್ ಸಿಉ ನಾಹೀ ಚಾರಾ
ತಾ ಕಉ ಕೀಜೈ ಸದ್ ನಮಸ್ಕಾರಾ
ಜಾಕೈ ಮನಿ ಲಾಗಾ ಪ್ರಭು ಮೀಠಾ
ಸರಬ್ ಸೂಖ್ ತಾಹೂ ಮನಿ ವೂಠಾ
ಜಿಸು ಜನ್ ಅಪ್‌ನಾ ಹುಕುಮು ಮನಾಇಆ
ಸರಬ್ ಥೋಕ್ ನಾನಕ್ ತಿನಿ ಪಾಇಆ ॥ 1 ॥

5/2

ಅಗನತ್ ಸಾಹು ಅಪ್‌ನೀ ದೆ ರಾಸಿ
ಖಾತ್ ಪೀತ್ ಬರ್‌ತೈ ಅನದ್ ಉಲಾಸಿ
ಅಪ್‌ನೀ ಅಮಾನ್ ಕಛು ಬಹುರಿ ಸಾಹುಲೇಇ
ಅಗಿ ಆನೀ ಮನಿ ರೋಸು ಕರೇಇ
ಅಪ್‌ನೀ ಪ್ರತೀತಿ ಆಪ್ ಹೀ ಖೋವೈ
ಬಹುರಿ ಉಸ್‌ಕಾ ಬಿಸ್‌ವಾಸ್ ನ ಹೋವೈ
ಜಿಸ್‌ಕೀ ವಸ್‌ತು ತಿಸು ಆಗೈ ರಾಖೈ
ಪ್ರಭ್ ಕೀ ಆಗೀಆ ಮಾನೈ ಮಾಥೈ
ಉಸ್ ತೇ ಚಉಗನ್ ಕರೈ ನಿಹಾಲ್
ನಾನಕ್ ಸಾಹಿಬು ಸದಾ ದಯಾಲ್ ॥ 2 ॥

5/3

ಅನಿಕ್ ಭಾತಿ ಮಾಯಾ ಕೇಹೇತ್
ಸರ್‌ಪರ್ ಹೋವತ್ ಜಾನು ಅನೇತ್

ಅಷ್ಟಪದಿ—5

ಹತ್ತು ವಸ್ತುವನ್ನು ಪಡೆದು ಮತ್ತೆಯೂ ಪಡೆಯುವುದು
ಒಂದು ವಸ್ತು ಕಾರಣ ವಿಶ್ವಾಸ ಕಳೆದುಕೊಳುವುದು
ಕಿತ್ತುಕೊಂಡು ಹತ್ತನೂ ಕೊಡದೆ ಹೋದರೊಂದನೂ
ಹೇಳು ಮತ್ತೆ ಮೂಢನು ಏನು ಮಾಡಬಲ್ಲನು
ಯಾವ ಕ್ಲೇಶಗಳೂ ಇರದ ಒಡೆಯನೊಡನಿರು
ಅವನನೇ ಸದಾ ನೀ ನಮಿಸುತಿರು
ಯಾರ ಮನದಲಿ ರುಚಿಕರನೊ ಪ್ರಭುವು
ಆ ಮನದಲ್ಲಿ ವಾಸಿಸುವುದು ಸರ್ವ ಸುಖವು
ಆರನು ತನ್ನಾಜ್ಞೆಯಿಂದ ಒಲಿಸಿರುವನೋ
ಸರ್ವಸ್ವವನು ನಾನಕನೆ ಅವನಿಗೆ ಹೊಂದಿಸಿರುವನು ‖ 1 ‖

5/2

ತನ್ನ ಅಗಣಿತ ಧನವ ಒಡೆಯ ಕೊಡುವನು
ಅದ ತಿಂದು ಕುಡಿದು ಇವ ಆನಂದಿಸುವನು
ತನ್ನ ನಿಧಿಯ ಹಣ ಸ್ವಲ್ಪ ತೆಗೆಯಲೊಡೆಯನು
ಅಜ್ಞಾನಿ ತನ್ನ ಮನದಲಿ ಕೋಪವಡೆವನು
ತನ್ನ ವಿಶ್ವಾಸವನು ತಾನೇ ಕಳೆದುಕೊಳುವನು
ಮತ್ತವನು ವಿಶ್ವಾಸ ಗಳಿಸಿಕೊಳ್ಳನು
ವಸ್ತು ಯಾರದೋ ಅದನು ಅವರ ಎದುರಿಡು
ಪ್ರಭುವಿನಾಜ್ಞೆಯ ಶಿರದಿ ಧರಿಸಿಕೊಂಡುಬಿಡು
ಮತ್ತೆ ಮೇಲೆತ್ತುವನದನು ನಾಲ್ಕು ಪಾಲು
ನಾನಕ ದಾಸ ಸದಾ ಅತಿ ದಯಾಳು ‖ 2 ‖

5/3

ಮಾಯೆಯಾಟವೋ ಅನೇಕ ರೀತಿ
ಅದಕಿಹುದು ಅವಶ್ಯ ಅವನತಿ

ಬಿರಖ್ ಕೀ ಛಾಯಾ ಸಿವು ರಂಗ ಲಾವ್ವೈ
ಓಹು ಬಿನಸ್ಸೈ ವಹ್ ಮನಿ ಪಛ್‌ತಾವ್ವೈ
ಜೋ ದಿಸ್ಸೈ ಸೋ ಚಾಲನ್‌ಹಾರ್
ಲಪಟಿ ರಹಿ ಓ ತಹ್ ಅಂಧ್ ಅಂಧಾರ್
ಬಟಾಊ ಸಿಉ ಜೋ ಲಾವ್ವೈ ನೇಹ್
ತಾ ಕಉ ಹಾಥಿ ನ ಆವ್ವೈ ಕೇಹ್
ಮನ್ ಹರಿ ಕೆ ನಾಮ್‌ಕೀ ಪ್ರೀತಿ ಸುಖ್‌ದಾಈ
ಕರಿ ಕಿರ್‌ಪಾ ನಾನಕ್ ಆಪಿ ಲಏ ಲಾಈ ॥ 3 ॥

5/4

ಮಿಥ್ಯಾ ತನ್ ಧನ್ ಕುಟುಂಬ್ ಸಬಾಇಆ
ಮಿಥ್ಯಾ ಹವು ಮೈ ಮಮ್‌ತಾ ಮಾಯಾ
ಮಿಥ್ಯಾ ರಾಜ್ ಜೋಬನ್ ಧನ್ ಮಾಲ್
ಮಿಥ್ಯಾ ಕಾಮ್ ಕ್ರೋಧ್ ಬಿಕ್‌ರಾಲ್
ಮಿಥ್ಯಾ ರಥ್ ಹಸ್‌ತೀ ಅಸ್ವ್ ಬಸ್‌ತ್ರಾ
ಮಿಥಿಆ ರಂಗ್ ಸಂಗಿ ಮಾಇಆ ಪೇಖಿ ಹಸ್‌ತಾ
ಮಿಥ್ಯಾ ಧ್ರೋಹ್ ಮೋಹ್ ಅಭಿಮಾನ್
ಮಿಥ್ಯಾ ಆಪಸ್ ಉಪರಿ ಕರತ್ ಗುಮಾನ್
ಅಸ್‌ಥಿರ್ ಭಗ್‌ತಿ ಸಾಧ್ ಕೀ ಸರನ್
ನಾನಕ್ ಜಪಿ ಜಪಿ ಜೀವ್ವೈ ಹರಿ ಕೇ ಚರನ್ ॥ 4 ॥

5/5

ಮಿಥ್ಯಾ ಸ್ರವನ್ ಪರ್ ನಿಂದಾ ಸುನ್‌ಹಿ
ಮಿಥ್ಯಾ ಹಸ್‌ತ್ ಪರ್ ದರಬ್ ಕಉ ಹಿರ್‌ಹಿ
ಮಿಥ್ಯಾ ನೇತ್ರ್ ಪೇಖತ್ ಪರ್‌ತ್ರಿಅ ರೂಪಾದ್
ಮಿಥ್ಯಾ ರಸ್‌ನಾ ಭೋಜನ್ ಅನ್‌ಸ್ವಾದ್
ಮಿಥ್ಯಾ ಚರನ್ ಪರ್ ಬಿಕಾರ್ ಕಉ ಧಾವ್‌ಹಿ
ಮಿಥ್ಯಾ ಮನ್ ಪರ್ ಲೋಭ್ ಲುಭಾವಹಿ

ಮರದ ನೆಳಲು ತರುವುದಾನಂದ
ಮನಕೆ ದುಃಖ ಅದರ ನಾಶದಿಂದ
ಕಣ್ಣಿಗೆ ಕಾಣುವುದು ನಾಶವಾಗುವುದು
ಕುರುಡನಿಹನು ಕತ್ತಲನು ಹಿಡಿದು
ಯಾತ್ರಿಕನಲ್ಲಿ ಪ್ರೇಮವಿಡುವನಿಗೆ
ಏನೂ ಸಿಗದು ಕಡೆಗವನ ಕೈಗೆ
ಮನವೆ ಹರಿನಾಮ ಪ್ರೀತಿ ಸುಖಕರ
ಪ್ರೀತಿಸುವ ಕೃಪೆತೋರಿ ನಾನಕ ದಯಾಕರ ॥ 3 ॥

5/4

ತನು ಧನ ಕುಟುಂಬ ಸಹಿತವೆಲ್ಲ ಮಿಥ್ಯೆಯು
ಸ್ವಾಭಿಮಾನ ಮಮತೆ ಮಾಯೆಯೆಲ್ಲ ಮಿಥ್ಯೆಯು
ರಾಜ್ಯ ಯೌವನ ಧನ ಪದಾರ್ಥವೆಲ್ಲ ಮಿಥ್ಯೆಯು
ಭಯಂಕರದ ಕಾಮ ಕ್ರೋಧ ಮನವು ಮಿಥ್ಯೆಯು
ರಥ ಗಜಾಶ್ವ ವಸ್ತ್ರವೆಲ್ಲ ಬರಿಯ ಮಿಥ್ಯೆಯು
ಮಾಯಾನಂದದೊಡನೆ ಆನಂದಿಸುವುದು ಮಿಥ್ಯೆಯು
ದ್ರೋಹ ಮೋಹ ಅಭಿಮಾನಗಳೆಲ್ಲ ಮಿಥ್ಯೆಯು
ತನ್ನ ತಾನೆಭಿಮಾನಿಸುವ ಗರ್ವ ಮಿಥ್ಯೆಯು
ಭಕ್ತ ಸಂತ ಸಂಕುಲಕೆ ಶರಣಾಗುವುದೇ ಸತ್ಯವು
ನಾನಕ ಜಪಿಸುತ ಜೀವಿಸುವ ಹರಿ ಚರಣ ನಿತ್ಯವು ॥ 4 ॥

5/5

ನಿಂದೆಗಳನಾಲಿಸುವ ಕಿವಿಯು ಮಿಥ್ಯೆಯು
ಪರ ದ್ರವ್ಯ ಅಪಹರಿಸುವ ಕೈಯಿ ಮಿಥ್ಯೆಯು
ಪರ ಸ್ತ್ರೀರೂಪ ದರ್ಶನದ ಕಣ್ಣು ಮಿಥ್ಯೆಯು
ಅಸ್ವಾದ ಭೋಜನದ ಜಿಹ್ವೆ ಮಿಥ್ಯೆಯು
ಕುಕರ್ಮಕ್ಕೆ ಧಾವಿಸುವ ಕಾಲು ಮಿಥ್ಯೆಯು
ದುರಾಸೆಗೆ ಒಳಪಡುವ ಮನವು ಮಿಥ್ಯೆಯು

ಮಿಥ್ಯಾ ತನ್ ನಹೀ ಪರ್‌ಉಪ್‌ಕಾರಾ
ಮಿಥ್ಯಾ ಬಾಸು ಲೇತ್ ಬಿಕಾರಾ
ಬಿನು ಬೂಝೇ ಮಿಥ್ಯಾ ಸಭ್ ಭಏ
ಸಫಲ್ ದೇಹ್ ನಾನಕ್ ಹರಿಹರಿ ನಾಮ್ ಲಏ ॥ 5 ॥

5/6

ಬಿರ್‌ಥೀ ಸಾಕತ್ ಕೀ ಆರಜಾ
ಸಾಚ್ ಬಿನಾ ಕಹ್ ಹೋವತ್ ಸೂಚಾ
ಬ್ರಿಥಾ ನಾಮ್ ಬಿನಾ ತನು ಅಂಧ್
ಮುಖಿ ಆವತ್ ತಾಕೈ ದುರ್‌ಗಂಧ್
ಬಿನು ಸಿಮ್‌ರನ್ ದಿನು ರೈನಿ ಬ್ರಿಥಾ ಬಿಹಾಯಿ
ಮೇಘ್ ಬಿನಾ ಜಿಉ ಖೇತೀ ತಾಇ
ಗೋವಿಂದ್ ಭಜನ್ ಬಿನು ಬ್ರಿಥೇ ಸಬ್ ಕಾಮ್
ಜಿಉ ಕಿರ್‌ಪನ್ ಕೆ ನಿರಾರಥ್ ದಾಮ್
ಧಂನಿ ಧಂನಿ ತೆ ಜನ್ ಜಿಹ್ ಘಟಿ ಬಸಿಓ
ಹರಿ ನಾಉ
ನಾನಕ್ ತಾಕೈ ಬಲಿ ಬಲಿ ಜಾಉ ॥ 6 ॥

5/7

ರಹತ್ ಅವರ್ ಕಛು ಅವರ್ ಕಮಾವತ್
ಮನಿ ನಹಿ ಪ್ರೀತಿ ಮುಖ್‌ಹು ಗಂಢ್ ಲಾವತ್
ಜಾನನ್‌ಹಾರ್ ಪ್ರಭು ಪರ್‌ಬೀನ್
ಬಾಹರಿ ಭೇಖ್ ನ ಕಾಹೂ ಭೀನ್
ಔರ್ ಉಪದೇಸೈ ಆಪಿ ನ ಕರೈ
ಆವತ್ ಜಾವತ್ ಜನ್‌ಮೈ ಮರೈ
ಜಿಸ್‌ಕೈ ಅಂತರಿ ಬಸೈ ನಿರಂಕಾರು
ತಿಸ್ ಕೀ ಸೀಖ್ ತರೈ ಸಂಸಾರು
ಜೋ ತುಮ್ ಭಾನೆ ತಿನ್ ಪ್ರಭು ಜಾತಾ
ನಾನಕ್ ಉನ್ ಜನ್ ಚರನ್ ಪರಾತಾ ॥ 7 ॥

ಪರೋಪಕಾರವಿರದ ತನುವದುವೆ ಮಿಥ್ಯೆಯು
ದುರ್ವಾಸನೆ ಅಘ್ರಾಣಿಸುವ ಮೂಗು ಮಿಥ್ಯೆಯು
ಅರಿವಿಲ್ಲದಾಗಿಹರು ಮಿಥ್ಯಾಕೋರರು
ನಾನಕನೆ ಸಫಲ ದೇಹಿಗಳು ಹರಿ ಸ್ಮರಣೆ ಮಾಡುವರು ॥ 5 ॥

## 5/6

ಮನ ಮುಖದ ಅಭಿಲಾಷೆಗಳೆಲ್ಲ ವ್ಯರ್ಥವು
ಸತ್ಯವಿರದೆ ಆಗದು ಇದರ ಅರ್ಥವು
ನಾಮುದವಿನ ವ್ಯರ್ಥ ತನು ಆಗುವುದು ಅಂಥ
ಬರುವುದವನ ಬಾಯಿಂದ ಅತಿ ದುರ್ಗಂಧ
ವೃಥಾ ಸ್ಮರಿಸದೆ ಕಳೆಯುತಿದೆ ದಿನ ರಾತ್ರಿ
ಮಳೆಯಾಗದೆ ಸಿಗದು ಫಲ ಇದು ಖಾತ್ರಿ
ಗೋವಿಂದ ಭಜನೆ ವಿನ ಎಲ್ಲಾ ನಿಷ್ಪ್ರಯೋಜಕ
ಜಿಪುಣನ ಧನದಂತೆ ಎಲ್ಲವೂ ನಿರರ್ಥಕ
ಧನ ಧನ್ಯ ರಾಜನ, ಯಾರ ಹೃದಯ ವಾಸಿಯೋ
ಹರಿಯ ನಾಮವು
ಅಂತಃವರಿಗಿಹುದು, ಸದಾ ನಾನಕನ ಮಣಿವು ॥ 6 ॥

## 5/7

ಇರುವಿಕೆಯೆ ಬೇರೆ ಮಾಡುವ ಕೆಲಸವೇ ಬೇರೆ
ಮನದಲ್ಲಿ ಪ್ರೀತಿ ಇಲ್ಲ, ಬಾಯಲ್ಲಿ ಪ್ರೇಮ ಧಾರೆ
ಎಲ್ಲವನು ತಿಳಿದವನು ಪ್ರಭು ಪ್ರವೀಣನು
ಹೊರ ವೇಷ ಭೂಷಣಕೆ ತೊಯ್ಯನವನು
ಉಪದೇಶಿಸುವನನ್ಯರಿಗೆ ತಾ ಮಾಡನು
ಬಂದು ಹೋಗುವನು ಮತ್ತೆ ಹುಟ್ಟಿ ಸಾಯುವನು
ಯಾರ ಮನದೊಳಗಿಹನೋ ನಿರಂಕಾರನು
ಅವನಿಂದ ಕಲಿತು ವಿಶ್ವವನೀಸಿಬಿಡುವನು
ನಿನ್ನ ಹಿತಗಳನೆಲ್ಲ ಪ್ರಭುವು ಅರಿತಿಹನು
ನಾನಕನೆ ಆ ಜನರ ಪಾದಗಳಿಗೆರಗುವನು ॥ 7 ॥

5/8

ಕರು ಬಿನತೀ ಪಾರಬ್ರಹಮ್ ಸಭ್ ಜಾನ್ಯೈ
ಅಪನಾ ಕಿಆ ಆಪ್‌ಹಿ ಮಾನ್ಯೈ
ಆಪ್‌ಹಿ ಆಪ್ ಆಪಿ ಕರತ್ ನಿಬೇರಾ
ಕಿಸ್ಯೈ ದೂರಿ ಜನಾವತ್ ಕಿಸ್ಯೈ ಬುಝಾವತ್ ನೇರಾ
ಉಪಾವ್ ಸಿಆನಪ್ ಸಗಲ್ ತೆ ರಹತ್
ಸಭ್ ಕಛು ಜಾನ್ಯೈ ಆತಮ್‌ಕೀ ರಹತ್
ಜಿಸೆ ಭಾವ್ಯೈ ತಿಸು ಲಏ ಲಡಿ ಲಾಇ
ಥಾನ್ ಥನಂತರಿ ರಹಾ ಸಮಾಇ
ಸೋ ಸೇವಕ್ ಜಿಸ್ ಕಿರ್‌ಪಾ ಕರೀ
ನಿಮಖ್ ನಿಮಖ್ ಜಪಿ ನಾನಕ್ ಹರೀ ॥ 8 ॥

ಸಲೋಕು :

ಕಾಮ್ ಕ್ರೋಧ್ ಅರು ಲೋಭ್ ಮೋಹ್
ಬಿನಸಿ ಜಾಇ ಅಹಂಮೇವ್
ನಾನಕ್ ಪ್ರಭ್ ಸರ್‌ಣಾಗತಿ
ಕರಿ ಪ್ರಸಾದು ಗುರುದೇವ್

ಅಸಟ್‌ಪದಿ—6

ಜಿಹ್ ಪ್ರಸಾದಿ ಛತೀಹ್ ಅಂಮ್ರಿತ್ ಖಾಹಿ
ತಿಸು ಠಾಕುರ್ ಕಉ ರಖು ಮನ್ ಮಾಹಿ
ಜಿಹ್ ಪ್ರಸಾದಿ ಸುಗಂಧತ್ ತನಿ ಲಾವ್‌ಹಿ
ತಿಸ್ ಕಉ ಸಿಮರತ್ ಪರಮ್ ಗತಿ ಪಾವಾಹಿ
ಜಿಹ್ ಪ್ರಸಾದಿ ಬಸ್‌ಹಿ ಸುಖ್ ಮಂದರಿ
ತಿಸ್‌ಹಿ ಧಿಆಇ ಸದಾ ಮನ್ ಅಂದರಿ

5/8

ಗೈದ ಪ್ರಾರ್ಥನೆಯೆಲ್ಲ ಪರಬ್ರಹ್ಮ ತಿಳಿದಿಹನು
ತಾ ಮಾಡಿದುದನೆಲ್ಲ ಒಪ್ಪುವನು ತಾನು
ತಾನೆ ತಾನಾಗಿ ನಿರ್ವಹಿಸುವನು ತಾ ಮಾಡಿದುದನು
ಕೆಲವರಿಗೆ ದೂರ ಕೆಲವರಿಗೆ ಸಮೀಪ ಪ್ರಕಟವಾಗುವನು
ಜಾಣ್ಮೆ ಜಾಲಾದಿಗಳ ಹೊರಗಿರುವನವನು
ಆತ್ಮ ವಿಚಾರವನೆಲ್ಲ ತಿಳಿದಿರುವನವನು
ತಾನು ಭಾವಿಸುವರನು ತನ್ನ ಒಡಲಲ್ಲಿಡುವನು
ಸ್ಥಾನ ಸ್ಥಾನಾಂತರಗಳಲಿ ಸೇರಿರುವನವನು
ಯಾವ ಸೇವಕನಿಗೆ ಕೃಪೆದೋರುವನೊ ಅವನು
ಕ್ಷಣ ಕ್ಷಣವು ಹರಿಯನ್ನು ನಾನಕನೆ ಜಪಿಸುವನು ॥ 8 ॥

ಶ್ಲೋಕ :

ನಶಿಸಿ ಕಾಮ ಕ್ರೋಧ ಲೋಭ
ಮೋಹ ಅಂಧಕಾರದಣು
ಗುರುದೇವನ ಕೃಪೆ ಕೋರಿ
ನಾನಕ ಪ್ರಭುವಿಗೆ ಶರಣು

ಅಷ್ಟಪದಿ—6

ಯಾರ ಕೃಪೆಯಿಂದ ಸವಿದೆಯೋ ಮೂವತ್ತಾರು ಅಮೃತವನು
ಸದಾ ಕಾಲ ಮನದಲ್ಲಿ ನೆನೆಸು ಆ ಪ್ರಭುವನ್ನು
ಯಾರ ಕೃಪೆಯಿಂದ ದೇಹ ಸುಗಂಧಿಸುವುದೋ
ಸ್ಮರಿಸಿದರವನನ್ನು ಮುಕ್ತಿ ಲಭಿಸುವುದು
ಯಾರ ಕೃಪೆಯಿಂದ ಸುಖ ನೆಲೆಸುವುದೊ ಮನೆಯಲ್ಲಿ
ಧ್ಯಾನಿಸವನನ್ನು ಸದಾ ಮನದ ಮಂದಿರದಲ್ಲಿ

ಜಿಹ್ ಪ್ರಸಾದಿ ಗ್ರಿಹ್ ಸಂಗಿ ಸುಖ್ ಬಸ್‌ನಾ
ಆಠ್ ಪಹರ್ ಸಿಮ್‌ರಹು ತಿಸು ರಸ್‌ನಾ
ಜಿಹ್ ಪ್ರಸಾದಿ ರಂಗ್ ರಸ್ ಭೋಗ್
ನಾನಕ್ ಸದಾ ಧಿಆಈಐ ಧಿಆವನ್ ಜೋಗ್ ॥ 1 ॥

6/2

ಜಿಹ್ ಪ್ರಸಾದಿ ಪಾಟ್ ಪಟಂಬರ್ ಹಢಾವಹಿ
ತಿಸ್ ಹಿ ತ್ಯಾಗಿ ಕತ್ ಅವರ್ ಲುಭಾವಹಿ
ಜಿಹ್ ಪ್ರಸಾದಿ ಸುಖಿ ಸೇಜ್ ಸೋಈಜೈ
ಮನ್ ಆಠ್ ಪಹರ್ ತಾ ಕಾ ಜಸು ಗಾವೀಜೈ
ಜಿಹ್ ಪ್ರಸಾದಿ ತುಝುಃ ಸಭ್ ಕೋಊ ಮಾನೈ
ಮುಖಿ ತಾ ಕೋ ಜಸು ರಸನ್ ಬಖಾನೈ
ಜಿಹ್ ಪ್ರಸಾದಿ ತೇರೋ ರಹ್‌ತಾ ಧರಮ್
ಮನ್ ಸದಾ ಧಿಆಯಿ ಕೇವಲ್ ಪಾರ್‌ಬ್ರಹ್‌ಮ್
ಪ್ರಭ್ ಜೀ ಜಪತ್ ದರ್‌ಗಹ್ ಮಾನ್ ಪಾವಹಿ
ನಾನಕ್ ಪತಿ ಸೇತೀ ಘರಿ ಜಾವಹಿ ॥ 2 ॥

6/3

ಜಿಹ್ ಪ್ರಸಾದಿ ಅರೋಗ್ ಕಂಚನ್ ದೇಹಿ
ಲಿವ್ ಲಾವಹು ತಿಸು ರಾಮ್ ಸನೇಹಿ
ಜಿಹ್ ಪ್ರಸಾದಿ ತೇರಾ ಓಲಾ ರಹತ್
ಮನ್ ಸುಖ್ ಪಾವಹಿ ಹರಿ ಹರಿ ಜಸ್ ಕಹತ್
ಜಿಹ್ ಪ್ರಸಾದಿ ತೇರೆ ಸಗಲ್ ಛಿದ್ರ್ ಡಾಕೆ
ಮನ್ ಸರನೀ ಪರ್ ಠಾಕುರ್ ಪ್ರಭ್ ತಾಕೈ
ಜಿಹ್ ಪ್ರಸಾದಿ ತುಝುಃಕೋ ನ ಪಹೂಚೈ
ಮನ್ ಸಾಸಿ ಸಾಸಿ ಸಿಮರಹು ಪ್ರಭ್ ಊಚೆ
ಜಿಹ್ ಪ್ರಸಾದಿ ಪಾಈ ದುರ್ಲಭ್ ದೇಹ್
ನಾನಕ್ ತಾಕೀ ಭಗತಿ ಕರೇಹ್ ॥ 3 ॥

ಯಾರ ಕೃಪೆಯಿಂದಿಹುದೊ ಗೃಹ ಸುಖ ಸಂಗದಲ್ಲಿ
ಎಂಟು ಕಾಲವೂ ನಾಲಿಗೆಯು ಅವನನ್ನು ಸ್ಮರಿಸಲಿ
ಯಾರ ಕೃಪೆಯಿಂದ ಸ್ವಾದಿಸುವೆ ಆನಂದ ರಸವನ್ನು
ನಾನಕನೆ ಧ್ಯಾನಿಸು ಸದಾ ಆ ಧ್ಯಾನ ಯೋಗ್ಯನನ್ನು ॥ 1 ॥

6/2

ಯಾರ ಕೃಪೆಯಿಂದುಡುತಿಹೆಯೊ ರೇಷ್ಮೆ ವಸ್ತ್ರಗಳನ್ನು
ಅವನನ್ನು ಬಿಟ್ಟೇಕೆ ಮೋಹಿಸುವೆ ಇತರರನ್ನು
ಯಾರ ಕೃಪೆಯಿಂದ ಮಲಗುವೆಯೊ ಮೆತ್ತೆ ಮಂಚದ ಮೇಲೆ
ಹಾಡವನ ಯಶ ಮನವೆ ದಿನದ ಎಂಟು ವೇಳೆ
ಯಾರ ಕೃಪೆಯಿಂದ ನೀಡುವರೊ ನಿನಗೆ ಮಾನ್ಯತೆಯನ್ನು
ಬಾಯಿ ನಾಲಿಗೆ ತುಂಬ ಹಾಡವನ ಯಶವನ್ನು
ಯಾರ ಕೃಪೆ ಉಳಿಸಿದೆಯೊ ನಿನ್ನ ಧರ್ಮವನ್ನು
ಹೇ ಮನವೆ ! ಧ್ಯಾನಿಸು ಸದಾ ಕಾಲ ಆ ಪರಬ್ರಹ್ಮನನ್ನು
ಪ್ರಭು ಸ್ಮರಣೆಯಲ್ಲಿಹುದು ಬೃಂದಾವನದ ಸನ್ಮಾನ
ನಾನಕನೆ ! ಸೇರುವರವರು ಅತಿ ಗೌರವದ ಭವನ ॥ 2 ॥

6/3

ಯಾರ ಕೃಪೆಯಿಂದಿಹುದೊ ಅರೋಗ ಸುವರ್ಣ ದೇಹ
ಆ ರಾಮನೊಡನಿರಲಿ ಸದಾ ನಿನ್ನ ಸ್ನೇಹ
ಯಾರ ಕೃಪೆಯಿಂದಿಹುದೊ ನಿನಗೆ ತೆರೆಯು ಮರೆ
ಹರಿ ಯಶ ಹಾಡಿ ಮನ, ಹರಿ ಸುಖದಲ್ಲಿ ಮೆರೆ
ಯಾರ ಕೃಪೆಯಿಂದ ಮರೆಮಾಚುವುದೊ ನಿನ್ನೆಲ್ಲ ತಪ್ಪು
ಹೇ ಮನವೆ ಶರಣಾಗಿ ಪ್ರಭುವಿನ ಪಾದಗಳನಪ್ಪು
ಯಾರ ಕೃಪೆಯಿಂದ ಯಾರೂ ನಿನ್ನ ಸಮಾನಕೆ ಏರರು
ಆ ಮಹಾ ಪ್ರಭುವನ್ನ ನೆನೆ ಮನ ಉಸಿರು ಉಸಿರು
ಯಾರ ಕೃಪೆಯಿಂದ ಲಭಿಸಿತೋ ಈ ದುರ್ಲಭ ದೇಹ
ನಾನಕನೆ ಸದಾ ಅವನಲ್ಲಿರಲಿ ನಿನ್ನ ಭಕ್ತಿಯ ದಾಹ ॥ 3 ॥

6/4

ಜಿಹ್ ಪ್ರಸಾದಿ ಅಭೂಕನ್ ಪಹಿರೀಜೈ
ಮನ್ ತಿಸು ಸಿಮಿರತ್ ಕಿಉ ಆಲಸ್ ಕೀಜೈ
ಜಿಹ್ ಪ್ರಸಾದಿ ಅಸ್ವ್ ಹಸ್‌ತಿ ಅಸವಾರೀ
ಮನ್ ತಿಸು ಪ್ರಭ್ ಕಉ ಕಬ್‌ಹೂನ ಬಿಸಾರೀ
ಜಿಹ್ ಪ್ರಸಾದಿ ಬಾಗ್ ಮಿಲಖ್ ಧನಾ
ರಾಖು ಪರೋಇ ಪ್ರಭು ಅಪನೆ ಮನಾ
ಜಿನಿ ತೇರೀ ಮನ್ ಬನತ್ ಬನಾಈ
ಊಠತ್ ಬೈಠತ್ ಸದ್ ತಿಸಹಿ ಧಿಆಈ
ತಿಸ್‌ಹೀ ಧಿಆಈ ಜೋ ಏಕ್ ಅಲಖೈ
ಈಹಾ ಊಹಾ ನಾನಕ್ ತೇರೀ ರಖೈ ‖ 4 ‖

6/5

ಜಿಹ್ ಪ್ರಸಾದಿ ಕರ್‌ಹಿ ಪುಂನ್ ಬಹು ದಾನ್
ಮನ್ ಆಠ್ ಪಹರ್ ಕರಿ ತಿಸ್‌ಕಾ ಧಿಆನ್
ಜಿಹ್ ಪ್ರಸಾದಿ ತೂ ಆಚಾರ್ ಬಿಉಹಾರೀ
ತಿಸು ಪ್ರಭ್ ಕಉ ಸಾಸಿ ಸಾಸಿ ಚಿತಾರೀ
ಜಿಹ್ ಪ್ರಸಾದಿ ತೇರಾ ಸುಂದರ್ ರೂಪ್
ಸೋ ಪ್ರಭು ಸಿಮಿರಹು ಸದಾ ಅನೂಪ್
ಜಿಹ್ ಪ್ರಸಾದಿ ತೇರೀ ನೀಕೀ ಜಾತಿ
ಸೋ ಪ್ರಭು ಸಿಮರಿ ಸದಾ ದಿನ್‌ರಾತಿ
ಜಿಹ್ ಪ್ರಸಾದಿ ತೇರೀ ಪತಿ ರಹೈ
ಗುರು ಪ್ರಸಾದಿ ನಾನಕ್ ಜಸು ಕಹೈ ‖ 5 ‖

6/6

ಜಿಹ್ ಪ್ರಸಾದಿ ಸುನಹಿ ಕರನ್ ನಾದ್
ಜಿಹ್ ಪ್ರಸಾದಿ ಪೇಖ್‌ಹಿ ಬಿಸ್‌ಮಾದ್

## 6/4

ಯಾರ ಕೃಪೆಯಿಂದ ತೊಡುತಿಹೆಯೋ ನಾನಾಭರಣ
ಆಲಸ್ಯವೇಕೆ ಮನ ಸ್ಮರಿಸಲವನ
ಯಾರ ಕೃಪೆಯಿಂದಿಹುದೊ ಮಧುವನ ಭವನ ಧನ
ಆ ಪ್ರಭುವನಾವಾಸಿಸು ಮನದಲ್ಲಿ ಮನ
ಯಾರು ಹೀಗಾಗಿಸಿದರೋ ನಿನ್ನನ್ನು
ಎದ್ದಲ್ಲಿ ಕುಳಿತಲ್ಲಿ ಧ್ಯಾನಿಸುವವನನ್ನು
ಯಾರ ಕೃಪೆಯಿಂದಿಹರೊ ಕುದುರೆ ಆನೆ ಸವಾರರು
ಆ ಪ್ರಭುವನೆಂದೂ ಎಲ್ಲೂ ಮರೆಯದಿರು
ಧ್ಯಾನಿಸು ಒಬ್ಬನೇ ಆದ ಪರಬ್ರಹ್ಮನನ್ನು
ನಿನ್ನನ್ನು ಇಲ್ಲೂ ಅಲ್ಲೂ ನಾನಕನೇ ಸನ್ಮಾನಿಸುವವನನ್ನು ॥ 4 ॥

## 6/5

ಯಾರ ಕೃಪೆಯಿಂದ ಮಾಡುವೆ ಅಧಿಕ ಪುಣ್ಯ ದಾನ
ಎಂಟು ಕಾಲವೂ ಮಾಡು ಮನವೆ ಅವನ ಧ್ಯಾನ
ಯಾರ ಕೃಪೆಯಿಂದಿಹುದೊ ನಿನ್ನ ಶುದ್ಧ ವ್ಯವಹಾರ
ಆ ಪ್ರಭುವನ್ನು ನೆನೆ ಶ್ವಾಸ ಶ್ವಾಸ ಮನಸಾರ
ಯಾರ ಕೃಪೆಯಿಂದಿಹುದೊ ನಿನ್ನ ಸುಂದರ ರೂಪ
ಸದಾ ಸ್ಮರಿಸು ಆ ಪ್ರಭುವಿನ ಸುಂದರ ಅನುರೂಪ
ಯಾರ ಕೃಪೆಯಿಂದಿಹುದು ನಿನ್ನ ಉತ್ತಮ ಜಾತಿ
ಸ್ಮರಿಸು ಆ ಪ್ರಭುವನ್ನು ಸದಾ ದಿನ ರಾತ್ರಿ
ಯಾರ ಕೃಪೆಯಿಂದಿಹುದೊ ನಿನಗೆ ರಾಜ ಬೀಡು
ಹೇ ನಾನಕ ! ಗುರು ಕೃಪೆಯಿಂದವನ ಯಶ ಹಾಡು ॥ 5 ॥

## 6/6

ಯಾರ ಕೃಪೆಯಿಂದ ಕೇಳುವುದೊ ಬಗೆ ಬಗೆಯ ನಾದಗಳು
ಯಾರ ಕೃಪೆಯಿಂದ ಕಾಣುವುದೊ ವಿಸ್ಮಯಾದಿಗಳು

ಜಿಹ್ ಪ್ರಸಾದಿ ಬೋಲ್‌ಹಿ ಅಂಮ್ರಿತ್ ರಸ್‌ನಾ
ಜಿಹ್ ಪ್ರಸಾದಿ ಸುಖಿ ಸಹ್‌ಜೇ ಬಸ್‌ನಾ
ಜಿಹ್ ಪ್ರಸಾದಿ ಅಸತ್ ಕರ್ ಚಲ್‌ಹಿ
ಜಿಹ್ ಪ್ರಸಾದಿ ಸಂಪೂರನ್ ಫಲ್‌ಹಿ
ಜಿಹ್ ಪ್ರಸಾದಿ ಪರಮ್ ಗತಿ ಪಾವ್‌ಹಿ
ಜಿಹ್ ಪ್ರಸಾದಿ ಸುಖಿ ಸಹ್‌ಜಿ ಸಮಾವಹಿ
ಐಸಾ ಪ್ರಭು ತಿಆಗಿ ಅವ್‌ರ್ ಕತ್ ಲಾಗಹು
ಗುರು ಪ್ರಸಾದಿ ನಾನಕ್ ಮನಿ ಜಾಗ್‌ಹು ‖ 6 ‖

6/7

ಜಿಹ್ ಪ್ರಸಾದಿ ತೂ ಪ್ರಗಟ್ ಸಂಸಾರಿ
ತಿಸ್ ಪ್ರಭ್ ಕಉ ಮೂಲಿ ನ ಮನ್‌ಹು ಬಿಸಾರಿ
ಜಿಹ್ ಪ್ರಸಾದಿ ತೇರಾ ಪರ್‌ತಾಪು
ರೆ ಮನ್ ಮೂಢ್ ತೂ ತಾ ಕಉ ಜಾಪು
ಜಿಹ್ ಪ್ರಸಾದಿ ತೇರೀ ಕಾರಜ್ ಪೂರೇ
ತಿಸ್‌ಹಿ ಜಾನೂ ಮನ್ ಸದಾ ಹಜೂರೇ
ಜಿಹ್ ಪ್ರಸಾದಿ ತೂ ಪಾವಹಿ ಸಾಚು
ರೇ ಮನ್ ಮೇರೇ ತೂ ತಾಸಿಉ ರಾಚು
ಜಿಹ್ ಪ್ರಸಾದಿ ಸಭ್‌ಕೀ ಗತಿ ಹೋಇ
ನಾನಕ್ ಜಾಪ್ ಜಪೈ ಜಪು ಸೋಇ ‖ 7 ‖

6/8

ಆಪಿ ಜಪಾಏ ಜಪೈ ಸೋ ನಾಉ
ಆಪಿ ಗವಾಏ ಸು ಹರಿ ಗುನ್ ಗಾಉ
ಪ್ರಭ್ ಕಿರ್‌ಪಾ ತೆ ಹೋಇ ಪ್ರಗಾಸು
ಪ್ರಭೂ ದಯಾ ತೆ ಕಮಲ್ ಬಿಗಾಸು
ಪ್ರಭ್ ಸುಪ್ರಸಂನ್ ಬಸೈ ಮನಿ ಸೋಈ
ಪ್ರಭ್ ದಯಾ ತೆ ಮತಿ ಊತಮ್ ಹೋಇ

ಯಾರ ಕೃಪೆಯಿಂದ ನುಡಿಯುವುದೊ ಜಿಹ್ವಾಮೃತ
ಯಾರ ಕೃಪೆಯಿಂದಿಹುದೊ ಸಹಜ ಸುಖವಾಸಾಹುತ
ಯಾರ ಕೃಪೆಯಿಂದಿಹುದೊ ಅಂಗಾಂಗಗಳ ಚಲನೆ
ಯಾರ ಕೃಪೆಯಿಂದಿಹುದೊ ಸಂಪೂರ್ಣ ಫಲ ಸೇವನೆ
ಯಾರ ಕೃಪೆಯಿಂದಿಹುದೊ ಪರಮ ಗತಿ ಪ್ರಾಪ್ತಿ
ಯಾರ ಕೃಪೆಯಿಂದಿಹುದೊ ವಸತಿ ಸುಖ ವ್ಯಾಪ್ತಿ
ಅಂಥ ಪ್ರಭುವ ತೊರೆದು ಮತ್ತೆಲ್ಲಿ ನೀ ಹೋಗುವೆ
ನಾನಕ ಗುರು ಕೃಪೆಗೆ ನೀ ಜಾಗೃತನಾಗು ಮನವೆ ॥ 6 ॥

6/7

ಯಾರ ಕೃಪೆಯಿಂದ ಪ್ರಸಿದ್ಧ ನೀ ವಿಶ್ವದಲ್ಲಿ
ಆ ಪ್ರಭುವನೆಂದೂ ಮರೆಯದಿರು ಮನದಲ್ಲಿ
ಯಾರ ಕೃಪೆಯಿಂದ ಬೆಳಗುತಿದೆ ನಿನ್ನ ಪ್ರತಾಪ
ಓ ಮೂಢ ಮನ ! ನೀ ಮಾಡವನ ಜಪ ತಪ
ಯಾರ ಕೃಪೆಯಿಂದಾಗುತಿದೆ ನಿನ್ನ ಕಾರ್ಯ ಪೂರ್ಣ
ತಿಳಿ, ಮನವೇ ಅವನೇ ನಿನ್ನ ಭವತರಣ
ಯಾರ ಕೃಪೆಯಿಂದ ನೀ ಪಡೆಯುವೆಯೊ ಸತ್ಯ
ರಚಿಸಿಕೋ ನೀನವನ ಮನದಲ್ಲಿ ನಿತ್ಯ
ಯಾರ ಕೃಪೆಯಿಂದ ಗತಿಸುವುದೆಲ್ಲರ ಗತಿ
ಅದೇ ನಾನಕ ಜಪಿಸುವ ಜಪದ ಪದ್ಧತಿ ॥ 7 ॥

6/8

ನಾಮವನು ಜಪಿಸುವನೆ ಸ್ವಯಂ ನಾಮ ಜಪಿಸಿಸುವನು
ಹಾಡನ್ನು ಹಾಡುವನೆ ಸ್ವಯಂ ಹಾಡ ಹಾಡಿಸುವನು
ಪ್ರಭುವಿನ ಕೃಪೆಯಿಂದ ಬೆಳದಿಂಗಳನ್ನು ಹರಿಸುವನು
ಪ್ರಭುವಿನ ದಯೆಯಿಂದ ಹೃದಯ ಪದ್ಮವರಳಿಸುವನು
ಪ್ರಭು ಪ್ರಸನ್ನನಾದರೆ ಹೃದಯವಾಸಿಯಾಗುವನು
ಪ್ರಭುವು ದಯೆಯ ತೋರಿದರೆ ಸುಜ್ಞಾನ ನೀಡುವನು

ಸರಬ್ ನಿಧಾನ್ ಪ್ರಭ್ ತೇರೀ ಮಇಆ
ಆಪಹು ಕಛೂ ನ ಕಿನಹೂ ಲಇಆ
ಜಿತು ಜಿತು ಲಾವಹು ತಿತು ಲಗಹಿ ಹರಿನಾಥ್
ನಾನಕ್ ಇನ್‌ಕೈ ಕಛೂ ನ ಹಾಥ್ ॥ 8 ॥

ಸಲೋಕು :

ಆಗಮ್ ಅಗಾಧಿ ಪಾರಬ್ರಹಮ್ ಸೋಇ
ಜೋ ಜೋ ಕಹೈ ಸು ಮುಕ್‌ತಾ ಹೋಇ
ಸುನಿ ಮೀತಾ ನಾನಕೆ ಬಿನವಂತಾ
ಸಾಧ್ ಜನಾ ಕೀ ಅಚರಜ್ ಕಥಾ

ಅಸಟ್‌ಪದಿ—7

ಸಾಧ್ ಕೈ ಸಂಗಿ ಮುಖ್ ಊಜಲ್ ಹೋತ್
ಸಾಧ್ ಸಂಗಿ ಮಲು ಸಗಲೀ ಖೋತ್
ಸಾಧ್ ಕೈ ಸಂಗಿ ಮಿಟ್ಟೈ ಅಭಿಮಾನು
ಸಾಧ್ ಕೈ ಸಂಗಿ ಪ್ರಗಟ್ಟೈ ಸು ಗಿಆನು
ಸಾಧ್ ಕೈ ಸಂಗಿ ಬುಝ್ಝೈ ಪ್ರಭು ನೇರಾ
ಸಾಧ್ ಸಂಗಿ ಸಭು ಹೋತ್ ನಿಬೇರಾ
ಸಾಧ್ ಕೈ ಸಂಗಿ ಪಾಏ ನಾಮ್ ರತ್‌ನು
ಸಾಧ್ ಕೈ ಸಂಗಿ ಊಪರೀ ಜತನು
ಸಾಧ್ ಕೀ ಮಹಿಮಾ ಬರನೈ ಕೌನ್ ಪ್ರಾನೀ
ನಾನಕ್ ಸಾಧ್ ಕೀ ಸೋಭಾ ಪ್ರಭ್ ಮಾಹೀ ಸಮಾನೀ ॥ 1 ॥

7/2

ಸಾಧ್ ಕೈ ಸಂಗಿ ಅಗೋಚರ್ ಮಿಲ್ಲೈ
ಸಾಧ್ ಕೈ ಸಂಗಿ ಸದಾ ಪರ್‌ಫುಲ್ಲೈ

ಸರ್ವ ಗುಣ ನಿಧಾನನೆ ನಿನ್ನ ಮಾಯಾಮಂತ್ರವೆಲ್ಲ
ನೀನು ಎಂದು ಎಲ್ಲಿಯೂ ಯಾರಿಂದಲೇನು ಬಯಸಿಲ್ಲ
ಎಲ್ಲೆಲ್ಲಿ ಹಿಡಿವೆ ನೀನಲ್ಲಿ ಹಿಡಿವ ನಿನ್ನ ಹರಿನಾಥ
ನಾನಕನೆ ಮತ್ತೆಲ್ಲಿ ನೋಡಿದರೂ ಇಲ್ಲ ಅವನ ಹಸ್ತ ॥ 8 ॥

ಶ್ಲೋಕ :

ಅಗಮ ಅಗಾಧನು ಪರಬ್ರಹ್ಮ ಸ್ವರೂಪಿಯವನು
ಅವನನ್ನು ಜಪಿಸುವವನು ಮುಕ್ತನಾಗುವನು
ಓ ಮಿತ್ರನೆ ಕೇಳು — ನಾನಕ ವಿನಂಬ್ರಿಸುವನು
ಸಂತರ ಕಥೆ ಆಶ್ಚರ್ಯಜನಕವೆನ್ನುವನು

ಅಷ್ಟಪದಿ—7

ಸಾಧು ಸಂಗದಿಂದ ಮುಖ ಪ್ರಜ್ವಲಿತವಾಗುವುದು
ಸಾಧು ಸಂಗ, ಮಲವನೆಲ್ಲ ನಿರ್ಮಲೀಕರಿಸುವುದು
ಸಾಧುವಿನ ಸಂಗವು, ತೀರಿಸುವುದಭಿಮಾನ
ಸಾಧು ಸಂಗದಿಂದಲೇ ಆಗುವುದು ಸುಜ್ಞಾನ
ಸಾಧು ಸಂಗದಿಂದ ಪ್ರಭು ಹತ್ತಿರದಿಂದ ತಿಳಿವನು
ಸಾಧು ಸಂಗ ಪರಿಹರಿಸುವುದೆಲ್ಲ ಕಷ್ಟನಷ್ಟವನು
ಸಾಧು ಸಂಗದಿಂದ ಲಭ್ಯವೆಲ್ಲ ನಾಮ ರತ್ನವು
ಸಾಧು ಸಂಗವೆಲ್ಲ ಒಂದೆ ಹರಿಯನರಿವ ಯತ್ನವು
ಸಾಧುವಿನ ಮಹಿಮೆಯನು ವರ್ಣಿಸುವರಾರು ?
ನಾನಕ, ಸಂತರು ಸುಶೋಭಿತರು ಪ್ರಭುವಲ್ಲೆ ನೆಲೆಸುವರು ॥ 1 ॥

7/2

ಸಾಧು ಸಂಗದವರಿಗಿಹುದು ಅಗೋಚರನ ಗೋಚರ
ಸಾಧು ಸಂಗದವರಿಗಿಹುದು ಸಂಗ ಸದಾ ಪ್ರಫುಲ್ಲರ

ಸಾಧ್ ಕೈ ಸಂಗಿ ಆವಹಿ ಬಸಿ ಪಂಚಾ
ಸಾಧ್ ಸಂಗಿ ಅಂಮೃತ್ ರಸ್ ಭುಂಚಾ
ಸಾಧ್ ಸಂಗಿ ಹೋಇ ಸಬ್‌ಕೀ ರೇನ್
ಸಾಧ್ ಕೈ ಸಂಗಿ ಮನೋಹರ್ ಬೇನ್
ಸಾಧ್ ಕೈ ಸಂಗಿ ನ ಕತ್‌ಹೂ ಧಾವೈ
ಸಾಧ್ ಸಂಗಿ ಅಸ್‌ಥಿತಿ ಮನ್ ಪಾವೈ
ಸಾಧ್ ಕೈ ಸಂಗಿ ಮಾಯಾ ತೆ ಭಿನ್
ಸಾಧ್ ಸಂಗಿ ನಾನಕ್ ಪ್ರಭ್ ಸುಪ್ರಸನ್ನ ॥ 2 ॥

7/3

ಸಾಧ್ ಸಂಗಿ ದುಸ್‌ಮನ್ ಸಭೀ ಮೀತ್
ಸಾಧ್ ಕೈ ಸಂಗಿ ಮಹಾ ಪುನೀತ್
ಸಾಧ್ ಸಂಗಿ ಕಿಸ್ ಸಿಉ ನಹೀ ಬೈರ್
ಸಾಧ್ ಕೈ ಸಂಗಿ ನ ಬೀಗಾ ಪೈರ್
ಸಾಧ್ ಕೈ ಸಂಗಿ ನಾಹೀಕೊ ಮಂದ್
ಸಾಧ್ ಸಂಗಿ ಜಾನೇ ಪರ್‌ಮಾನಂದಾ
ಸಾಧ್ ಕೈ ಸಂಗಿ ನಾಹೀ ಹಉ ತಾಪ್
ಸಾಧ್ ಕೈ ಸಂಗಿ ತಜೈ ಸಭು ಆಪ್
ಆಪೇ ಜಾನೈ ಸಾಧ್ ಬಡಾಈ
ನಾನಕ್ ಸಾಧ್ ಪ್ರಭೂ ಬನಿ ಆಈ ॥ 3 ॥

7/4

ಸಾಧ್ ಕೈ ಸಂಗಿ ನ ಕಬ್‌ಹೂ ಧಾವೈ
ಸಾಧ್ ಕೈ ಸಂಗಿ ಸದಾ ಸುಖು ಪಾವೈ
ಸಾಧ್ ಸಂಗಿ ಬಸತು ಅಗೋಚರ್ ಲಹೈ
ಸಾಧು ಕೈ ಸಂಗಿ ಅಜರೂ ಸಹೈ
ಸಾಧ್ ಕೈ ಸಂಗಿ ಬಸೈ ಥಾನಿ ಊಚೈ
ಸಾಧ್ ಕೈ ಸಂಗಿ ಮಹಲಿ ಪಹೂಚೈ

ಸಾಧು ಸಂಗದವರಿಗೆ ವಶರು ದೂತರ್ಕೈವರು
ಸಾಧು ಸಂಗದವರೆಲ್ಲಾ ಅಮೃತ ಪಾನ ಗೈವರು
ಸಾಧು ಸಂಗ ಎಲ್ಲವನ್ನು ಧೂಳು ಮಾಡಿ ಬಿಡುವುದು
ಸಾಧು ಸಂಗರಧರದಿಂದ ವಚನ ಮೂಡಿ ಬರುವುದು
ಸಾಧು ಸಂಗದಿಂದ ಮನವು ಅಲ್ಲಿ ಇಲ್ಲಿ ಅಲೆಯದು
ಸಾಧು ಸಂಗದಿಂದ ಮನವು ಒಂದೆಡೆ ನೆಲೆವುದು
ಸಾಧು ಸಂಗವಾಗಿಹುದು ಮಾಯೆಯಿಂದ ಭಿನ್ನವು
ಸಾಧು ಸಂಗದಿಂದ ನಾನಕ ಪ್ರಭುವು ಸುಪ್ರಸನ್ನವು ॥ 2 ॥

## 7/3

ಸಾಧುಗಳ ಸಂಗದಿಂದ ಶತ್ರು ಮಿತ್ರರಾಗುವರು
ಸಾಧುಗಳ ಸಂಗದಿಂದ ಅತಿ ಪವಿತ್ರರಾಗುವರು
ಸಾಧು ಸಂಗವನ್ನು ಮಾಡಿ ಯಾರೂ ವೈರಿಗಳಾಗರು
ಸಾಧು ಸಂಗದವರು ಯಾರು ಅಡ್ಡ ದಾರಿ ಹಿಡಿಯರು
ಸಾಧು ಸಂಗವನ್ನು ಮಾಡಿ ಕೆಟ್ಟವರಾರೂ ಆಗರು
ಸಾಧು ಸಂಗವನ್ನು ಮಾಡಿ ಪರಮಾನಂದ ಹೊಂದುವರು
ಸಾಧು ಸಂಗದಿಂದ ಯಾವ ಅಹಂ ತಾಪವಿರುವುದಿಲ್ಲ
ಸಾಧು ಸಂಗದಿಂದಲೇ ತೊಲಗುವುವು ಅಹಂಗಳೆಲ್ಲ
ಸಾಧುಗಳ ಹಿರಿಮೆಯನು ತಾನೇ ಅರಿತಿರುವನು
ನಾನಕನೆ ! ಸಾಧುವಿಗೆ ಪ್ರಭುವು ಆಗಿ ಬಂದಿಹನು ॥ 3 ॥

## 7/4

ಸಾಧು ಸಂಗದಿಂದ ಎಂದೂ ಎಲ್ಲಿಯೂ ಅಲೆದಾಡನು
ಸಾಧು ಸಂಗದಿಂದ ಸದಾ ಪರಮ ಸುಖವ ಪಡೆವನು
ಸಾಧು ಸಂಗ ತೋರುವುದು ಕಾಣದಿರುವ ವಸ್ತುಗಳನು
ಸಾಧು ಸಂಗ ಕಲಿಸುವುದು ಅಸಹನೆಯಲ್ಲಿ ಸಹನೆಯನು
ಸಾಧು ಸಂಗದಿಂದ ಇಹುದು ಮೇಲ್ಮನೆಯ ವಾಸ
ಸಾಧು ಸಂಗದಿಂದ ಇಹುದು ವಿಮುಕ್ತ ಮಂದಹಾಸ

ತಂದೆ ಜನಿಸಿದುದನು ಮಗನು ಏನು ಬಲ್ಲನು
ತನ್ನ ರಚನೆ ನೀತಿಗೆ ತಾನೇ ಪ್ರಬಂಧಕನು
ಸುಬುದ್ಧಿ ಜ್ಞಾನ ಧ್ಯಾನವನ್ನು ಯಾರಿಗಿತ್ತನೋ
ಆ ಭಕ್ತನವನ ಧ್ಯಾನವನ್ನು ಸದಾ ಗೈಯುವನು
ತ್ರಿಗುಣದಲ್ಲೇ ತಿರುಗಿಸುತ ಯಾರ ನೀಡುವನೋ
ಜನನ ಮರಣದಲ್ಲಿ ಅವನು ಹೋಗಿ ಬರುವನು
ಮೇಲು ಕೀಳುಗಳೆಲ್ಲ ಅವನ ಸ್ಥಾನವಾಗಿದೆ
ನಾನಕ ! ಪ್ರಕಾಶಗೊಳಿಸುವಂಥ ರೀತಿ ಅವನದಾಗಿದೆ ॥ 3 ॥

16/4

ವಿವಿಧ ರೂಪವಾಗಿ ಮತ್ತೆ ವಿವಿಧ ಬಣ್ಣಗಳಲ್ಲಿದೆ
ವಿವಿಧ ರೂಪಗಳಲ್ಲಿ ಸೇರಿ ಒಂದೇ ಬಣ್ಣವಾಗಿದೆ
ವಿವಿಧ ಪ್ರಕಾರಗಳಲ್ಲಿ ಸೇರಿ ವಿಸ್ತಾರವಾಗಿದೆ
ಪ್ರಭು ಅವಿನಾಶಿ ಒಂದೇ ಓಂಕಾರವಾಗಿದೆ
ಕ್ಷಣದಲವನು ಅನೇಕ ಆಶ್ಚರ್ಯವೆಸಗುವವನು
ಅವನು ಸರ್ವ ವ್ಯಾಪಕನು ಎಲ್ಲೆಲ್ಲೂ ಇರುವವನು
ಅವನು ಅನೇಕ ರೀತಿ ರಚನೆಗಳನ್ನು ರಚಿಸಿಹನು
ಅವನು ತನ್ನ ಬೆಲೆಯನ್ನು ತಾನೇ ತಿಳಿದಿಹನು
ಅವನದೇ ಶರೀರವೆಲ್ಲ, ಎಲ್ಲ ಅವನ ಸ್ಥಾನಗಳು
ಜೀವಿಸಿಹನು ನಾನಕ ಜಪಿ ಜಪಿಸಿ ಹರಿ ನಾಮಗಳು ॥ 4 ॥

16/5

ನಾಮದ ಬಲದಿಂದ ಜೀವಜಂತುಗಳ ಉತ್ಪತ್ತಿ
ನಾಮದ ಬಲದಿಂದ ಖಂಡ ಬ್ರಹ್ಮಾಂಡದುತ್ಪತ್ತಿ
ನಾಮದ ಬಲದಿಂದ ಸ್ಮೃತಿಯು ವೇದ ಪುರಾಣ
ನಾಮದ ಬಲದಿಂದ ಜ್ಞಾನ ಧ್ಯಾನ ಶ್ರವಣ

ನಾಮ್ ಕೇ ಧಾರೆ ಆಗಾಸ್ ಪಾತಾಲ್
ನಾಮ್ ಕೇ ಧಾರೆ ಸಗಲ್ ಆಕಾರ್
ನಾಮ್ ಕೇ ಧಾರೆ ಪುರೀಆ ಸಭ್ ಭವನ್
ನಾಮ್ ಕೈ ಸಂಗಿ ಉಧರೆ ಸುನಿ ಸ್ರವನ್
ಕರಿ ಕಿರ್‌ಪಾ ಜಿಸ್ಕ್ಅ ಆಪ್‌ನೈ ನಾಮಿ ಲಾಏ
ನಾನಕ್ ಚಉಥೇ ಪರವ್ ಹಿ ಸೋಜನ್ ಗತಿಪಾಏ ॥ 5 ॥

16/6

ರೂಪ್ ಸತಿ ಜಾ ಕಾ ಸತಿ ಅಸ್‌ಥಾನ್
ಪುರಖು ಸತಿ ಕೇವಲ್ ಪರ್‌ಧಾನ್
ಕರ್‌ತೂತಿ ಸತಿ ಸತಿ ಜಾ ಕೀ ಬಾಣೀ
ಸತಿ ಪುರಖ್ ಸಭ್ ಮಾಹಿ ಸಮಾಣೀ
ಸತಿ ಕರಮ್ ಜಾ ಕೀ ರಚನಾ ಸತಿ
ಮೂಲ್ ಸತಿ ಸತಿ ಉತ್‌ಪತಿ
ಸತಿ ಕರಣೀ ನಿರ್‌ಮಲ್ ನಿರ್‌ಮಲೀ
ಜಿಸ್‌ಹಿ ಬುಝಾಏ ತಿಸ್‌ಹಿ ಸಭ್ ಭಲೀ
ಸತಿ ನಾಮ್ ಪ್ರಭ್‌ಕಾ ಸುಖದಾಈ
ಬಿಸ್ವಾಸು ಸತಿ ನಾನಕ್ ಗುರ್ ತೇ ಪಾಈ ॥ 6 ॥

16/7

ಸತಿ ಬಚನ್ ಸಾಧೂ ಉಪದೇಸ್
ಸತಿ ತೇ ಜನ್ ಜಾ ಕೈ ರಿದೈ ಪ್ರವೇಸ್
ಸತಿ ನಿರತಿ ಬೂಝೈ ಜೆ ಕೋಇ
ನಾಮ್ ಜಪತ್ ತಾ ಕೀ ಗತಿ ಹೋಇ
ಆಪಿ ಸತಿ ಕೀಆ ಸಭು ಸತಿ
ಆಪೆ ಜಾನೈ ಅಪನೀ ಮಿತಿ ಗತಿ

ನಾಮದಾಸರೆಯಲ್ಲಿ ಆಕಾಶ ಪಾತಾಳ
ನಾಮದಾಸರೆಯಲ್ಲಿ ಆಕಾರ ಬಹಳ
ನಾಮದಾಸರೆಯಿಂದ ಮಹಾ ನಗರ ಕುಟೀರ
ನಾಮದ ಶ್ರವಣದಿಂದ ಬಹು ಜನೋದ್ಧಾರ
ಯಾರಿಗೆ ಕೃಪೆದೋರಿ ತನ್ನ ನಾಮವಿಡುವನೋ
ನಾನಕನೆ, ನಾಲ್ಕು ಲೋಕಗಳಲೂ ಅವನು ಮುಕ್ತನಾಗುವನು ॥5॥

16/6

ಅವನ ರೂಪ ಸತ್ಯ, ಅವನ ಸ್ಥಾನ ಸತ್ಯ
ಅವನೇ ಅಕಾಲ ಪುರುಷ ಪ್ರಧಾನ ಸತ್ಯ
ಅವನ ಕರ್ಮ ಸತ್ಯ, ಅವನ ವಚನ ಸತ್ಯ
ಸಕಲದಲ್ಲು ಅವನಿರುವ ಪುರುಷ ಸತ್ಯ
ಅವನ ರಚನಾ ಕಾರ್ಯ ಸತ್ಯ
ಅವನ ಆದಿ ಉತ್ಪತ್ತಿ ಸತ್ಯ
ಸಕಲ ಕಾರ್ಯ ನಿರ್ಮಲಕೂ ಅತಿ ನಿರ್ಮಲ
ಇದರರಿವು ಆನಂದದ ಪ್ರಭು ಪದತಲ
ಪ್ರಭುವಿನ ಸತ್ಯನಾಮ ಸುಖಕರ
ನಾನಕನೆ ! ಸತ್ಯ, ವಿಶ್ವಾಸ, ಗುರುವಿನಿಂದ ದೊರೆತ ವರ ॥ 6 ॥

16/7

ಸಾಧುಗಳ ವಚನ ಉಪದೇಶ ಸತ್ಯ
ಹೃದಯ ಹೊಕ್ಕು ನಿಲುವ ಜನರು ಸತ್ಯ
ಸತ್ಯವನು ನಿರ್ಣಯಿಸಿ ಅರಿತ ಕೆಲವರು
ನಾಮವನು ಜಪಿಸಿ ಸದ್ಗತಿ ಹೊಂದುವರು
ಸತ್ಯವಂತನು ತಾನು ಸತ್ಯವನೆ ಎಸಗಿಹನು
ತಿಳಿದಿಹನು ತಾನೇ ತನ್ನ ಗತಿ ಮಿತಿಗಳನು

ಜಿಸ್ ಕೀ ಸ್ರಿಸ್‌ಟಿ ಸು ಕರಣೈಹಾರು
ಅವರ್ ನ ಬೂಝೈ ಕರನ್ ಬಿಚಾರು
ಕರ್‌ತೇ ಕೀ ಮಿತಿ ನ ಜಾನೈ ಕೀಆ
ನಾನಕ್ ಜೋ ತಿಸು ಭಾವೈ ಸೋ ವರ್‌ತೀಆ ॥ 7 ॥

16/8

ಬಿಸ್‌ಮನ್ ಬಿಸಮ್ ಭಏ ಬಿಸ್‌ಮಾದ್
ಜಿನಿ ಬೂಝಿಆ ತಿಸು ಆಇಆ ಸ್ವಾದ್
ಪ್ರಭ್ ಕೈ ರಂಗಿ ರಾಚಿ ಜನ್ ರಹೆ
ಗುರ್ ಕೈ ಬಚನಿ ಪದಾರಥ್ ಲಹೇ
ಓಇ ದಾತೆ ದುಖ್ ಕಾಟನ್ ಹಾರ್
ಜಾ ಕೈ ಸಂಗಿ ತರೈ ಸಂಸಾರ್
ಜನ್ ಕಾ ಸೇವಕ್ ಸೋ ಬಡ್ ಭಾಗೀ
ಜನ್ ಕೈ ಸಂಗಿ ಏಕ್ ಲಿವ್ ಲಾಗೀ
ಗುನ್ ಗೋವಿಂದ್ ಕೀರ್‌ತನ್ ಜನ್ ಗಾವೈ
ಗುರ್ ಪ್ರಸಾದಿ ನಾನಕ್ ಫಲ್ ಪಾವೈ ॥ 8 ॥

ಸಲೋಕು :

ಆದಿ ಸಚ್ ಜುಗಾದಿ ಸಚ್
ಹೈ ಭೀ ಸಚ್ ನಾನಕ್ ಹೋಸೀ ಭಿ ಸಚ್

ಅಸಟ್‌ಪದಿ—17

ಚರನ್ ಸತಿ ಸತಿ ಪರಸನ್‌ಹಾರ್
ಪೂಜಾ ಸತಿ ಸತಿ ಸೇವ್‌ದಾರ್
ದರಸನ್ ಸತಿ ಪೇಖನ್‌ಹಾರ್
ನಾಮ್ ಸತಿ ಸತಿ ಧ್ಯಾವನ್‌ಹಾರ್

ಯಾರ ಸೃಷ್ಟಿಯೋ ಅವನು ಅವನೇ ಮಾಡುವನು
ಇತರರಿಂದ ಅರಿತು ಅವನು ಮಾಡನೇನನು
ಕರ್ತನ ಸೃಷ್ಟಿ ವಿಸ್ತಾರವನಾರೂ ಅರಿಯಲಾಗದು
ನಾನಕ, ಅವನಿಚ್ಛೆಯಾದುದೆಲ್ಲ ಆಗಿಯೇ ತೀರುವುದು ॥ 7 ॥

16/8

ಆಶ್ಚರ್ಯವೇ ತನ್ನ ಆಶ್ಚರ್ಯದ ರೂಪ ತಾಳಿತು
ಇದನು ತಿಳಿದವಗೆ ಅದರ ಸ್ವಾದ ದೊರಕಿತು
ಪ್ರಭುವಿನ ಬಣ್ಣದ ಬಣ್ಣ ಬಳಿದುಕೊಂಡವರು
ಗುರು ವಚನಗಳ ಪದಾರ್ಥ ತಿಳಿಯುವರು
ಕೊಡುವನವನು ದುಃಖವನು ಪರಿಹರಿಸುವನು
ಅವನೊಡನೆ ಸಂಸಾರಾಂಬುಧಿ ತೇಲಿಸಿ ಬಿಡುವನು
ಭಕ್ತರ ಸೇವಕ ಅತಿ ಭಾಗ್ಯವಂತನು
ಭಕ್ತರೊಡನೆ ಅವನೊಬ್ಬನೆ ಭಗವಂತನು
ಭಕ್ತರು ಗುಣಗೋವಿಂದನ ಕೀರ್ತನೆ ಹಾಡುವರು
ನಾನಕ ಗುರು ಕೃಪೆಯಿಂದ ಫಲವ ಪಡೆಯುವರು ॥ 8 ॥

ಶ್ಲೋಕ :

ಆದಿ ಸತ್ಯ, ಯುಗಾದಿ ಸತ್ಯ
ಆಗಿರುವುದು ಸಹ ಸತ್ಯ ನಾನಕ ಆಗುವುದೂ ಸಹ ಸತ್ಯ

ಅಷ್ಟಪದಿ – 17

ಹರಿಪಾದ ಸತ್ಯ, ಪಾದ ಸ್ಪರ್ಶನ ಸತ್ಯ
ಅದರ ಪೂಜೆ ಸತ್ಯ, ಅದ ಸೇವಿಸುವನು ಸತ್ಯ
ಅವನ ದರ್ಶನ ಸತ್ಯ, ದರ್ಶಿಸುವನು ಸತ್ಯ
ಅವನ ನಾಮವು ಸತ್ಯ, ಅದರ ಧ್ಯಾನಿಯು ಸತ್ಯ

ಆಪಿ ಸತಿ ಸತಿ ಸಬ್ ಧಾರೀ
ಆಪೇ ಗುಣ ಆಪೇ ಗುಣ್‌ಕಾರೀ
ಸಬದ್ ಸತಿ ಸತಿ ಪ್ರಭು ಬಕ್‌ತಾ
ಸುರತಿ ಸತಿ ಸತಿ ಜಸು ಸುನ್‌ತಾ
ಬುಝ್ಬುನ್‌ಹಾರ್ ಕಉ ಸತಿ ಸಭ್ ಹೋಇ
ನಾನಕ್ ಸತಿ ಸತಿ ಪ್ರಭು ಸೋಇ ॥ 1 ॥

17/2

ಸತಿ ಸರೂಪ್ ರಿದೈ ಜಿನಿ ಮಾನಿಆ
ಕರನ್ ಕರಾವನ್ ತಿನಿ ಮೂಲ್ ಪಛಾನಿಆ
ಜಾಕೈ ರಿದೈ ಬಿಸ್ವಾಸ್ ಪ್ರಭ್ ಆಇಆ
ತತ್ ಗಿಆನ್ ತಿಸು ಮನಿ ಪ್ರಗಟಾಇಆ
ಭೈ ತೆ ನಿರ್‌ಭಉ ಹೋಇ ಬಸಾನಾ
ಜಿಸ್ ತೆ ಉಪಜಿಆ ತಿಸು ಮಾಹಿ ಸಮಾನಾ
ಬಸತು ಮಾಹಿ ಲೆ ಬಸತು ಗಡಾಈ
ತಾ ಕಉ ಭಿಂನ್ ನ ಕಹನಾ ಜಾಈ
ಬೂಝೈ ಬೂಝನಹಾರ್ ಬಿಬೇಕ್
ನಾರಾಇನ್ ಮಿಲೇ ನ್‌ನಕ್ ಏಕ್ ॥ 2 ॥

17/3

ಠಾಕುರ್ ಕಾ ಸೇವಕ್ ಆಗಿಆಕಾರೀ
ಠಾಕುರ್ ಕಾ ಸೇವಕ್ ಸದಾ ಪೂಜಾರೀ
ಠಾಕುರ್ ಕೆ ಸೇವಕ್ ಕೀ ಮನಿ ಪರ್‌ತೀತಿ
ಠಾಕುರ್ ಕೆ ಸೇವಕ್ ಕೀ ನಿರ್‌ಮಲ್ ರೀತಿ
ಠಾಕುರ್ ಕಉ ಸೇವಕ್ ಜಾನೈ ಸಂಗಿ
ಪ್ರಭ್ ಕಾ ಸೇವಕ್ ನಾಮ್ ಕೈ ರಂಗಿ

ಸತ್ಯನೂ ಅವನೆ, ಆತನದೆ ಸತ್ಯ ರಚನೆ
ಗುಣನೂ ಅವನೆ, ಗುಣಕರನೂ ಅವನೆ
ವಚನ ಸತ್ಯ, ಪ್ರಭು ವಚನಕಾರ ಸತ್ಯ
ಶ್ರವಣ ಸತ್ಯ, ಯಶದ ಶ್ರವಣಕಾರ ಸತ್ಯ
ಎಲ್ಲ ಬಲ್ಲವನಿಗೆ ವಸ್ತುವೆಲ್ಲ ಸತ್ಯ
ನಾನಕನೆನುವನು ಸತ್ಯ ಪ್ರಭು ಸತ್ಯ ಸತ್ಯ ‖ 1 ‖

## 17/2

ಸತ್ಯ ಸ್ವರೂಪವನು ಹೃದಯದಿಂದೊಪ್ಪುವನು
ಮಾಡಿಸುವನು ಮಾಡಿ ಮೂಲದ ಅರಿವನ್ನು
ಯಾರ ಹೃದಯದಲಿ ಪ್ರಭು ವಿಶ್ವಾಸ ಮೂಡಿಹುದು
ಅವನ ಮನದಲಿ ತತ್ವಜ್ಞಾನ ಪ್ರಕಟವಾಗಿಹುದು
ವಾಸಿಸುವ ಸದಾ ನಿರ್ಭಯದಿಂದವನು
ಎಲ್ಲಿಂದ ಬಂದನೋ ಮತ್ತಲ್ಲೆ ಹೋಗುವನು
ಒಂದು ವಸ್ತುವಿನೊಡನೆ ಮತ್ತೊಂದು ವಸ್ತು ಸೇರಲು
ಆ ವಸ್ತುವನು ಬಾರದು ಬೇರೆಂದು ಹೇಳಲು
ಇದನರಿತವನೆ ಈ ವಿಷಯವರಿತವನು
ನಾನಕನೆ ! ನಾರಾಯಣನೊಡನೆ ಒಂದಾಗುವನು ‖ 2 ‖

## 17/3

ಪರಮೇಶನ ಸೇವಕನು ಅಜ್ಞಾಕಾರಿ
ಪರಮೇಶನ ಸೇವಕನು ಪೂಜಾರಿ
ಸೇವಕನ ಮನ ಪರಮೇಶನ ನಂಬಿಹುದು
ಪರಮೇಶನ ಸೇವಕನ ಮನ ನಿರ್ಮಲವಾದುದು
ಸೇವಕನು ಪ್ರಭುವನು ಮಿತ್ರನೆಂದೆಣಿಸುವನು
ಸೇವಕನ ನಾಮ ಸ್ಮರಣೆಗೆ ಪ್ರಭು ಮಣಿದಿಹನು

ಸೇವಕ್ ಕಉ ಪ್ರಭ್ ಪಾಲನ್‌ಹಾರಾ
ಸೇವಕ್ ಕೀ ರಾಖೈ ನಿರಂಕಾರಾ
ಸೋ ಸೇವಕ್ ಜಿಸ್ ದಯಾ ಪ್ರಭು ಧಾರೈ
ನಾನಕ್ ಸೋ ಸೇವಕ್ ಸಾಸಿ ಸಾಸಿ ಸಮಾರೈ ॥ 3 ॥

17/4

ಅಪ್‌ನೇ ಜನ್ ಕಾ ಪರದಾ ಢಾಕೈ
ಅಪ್‌ನೇ ಸೇವಕ್ ಕೀ ಸರ್‌ಪರ್ ರಾಖೈ
ಅಪನೇ ದಾಸ್ ಕಉ ದೇಇ ಬಡಾಈ
ಅಪನೇ ಸೇವಕ್ ಕಉ ನಾಮ್ ಜಪಾಈ
ಅಪನೇ ಸೇವಕ್ ಆಪಿ ಪತಿ ರಾಖೈ
ತಾ ಕೀ ಗತಿ ಮಿತಿ ಕೋಇ ನ ಲಾಖೈ
ಪ್ರಭ್ ಕೇ ಸೇವಕ್ ಕಉ ಕೋ ನ ಪಹೂಚೈ
ಪ್ರಭ್ ಕೇ ಸೇವಕ್ ಊಚ್ ತೇ ಊಚೇ
ಜೋ ಪ್ರಭಿ ಅಪನೀ ಸೇವಾ ಲಾಇಆ
ನಾನಕ್ ಸೋ ಸೇವಕ್ ದಹ್ ದಿಸಿ ಪ್ರಗಟಾಇಆ ॥ 4 ॥

17/5

ನೀಕೀ ಕೀರೀ ಮಹಿ ಕಲ್ ರಾಖೈ
ಭಸಮ್ ಕರೈ ಲಸ್‌ಕರ್ ಕೋಟಿ ಲಾಖೈ
ಜಿಸ್ ಕಾ ಸಾಸು ನ ಕಾಢತ್ ಆಪಿ
ತಾ ಕಉ ರಾಖತ್ ದೇ ಕರಿ ಹಾಥ್
ಮಾನಸ್ ಜತನ್ ಕರತ್ ಬಹು ಭಾತಿ
ತಿಸ್ ಕೇ ಕರ್‌ತಬ್ ಬಿರಥೇ ಜ್‌ತಿ
ಮಾರೈ ನ ರಾಖೈ ಅವರು ನ ಕೋಇ
ಸರಬ್ ಜೀಅ ಕಾ ರಾಖಾ ಸೋಇ
ಕಾಹೆ ಸೋಚ್‌ಕರ್ ಹಿ ರೇ ಪ್ರಾಣೀ
ಜಪಿ ನಾನಕ್ ಪ್ರಭ್ ಅಲಖ್ ಬಿಡಾಣೀ ॥ 5 ॥

ಪ್ರಭು ಪಾಲಿಸುವನು ತನ್ನ ಸೇವಕನನು
ಪ್ರಭು ಸೇವಕನ ನಿಗರ್ವದಿಂದಿರುಸುವನು
ಪ್ರಭು ದಯೆ ಇರುವನೆ ಪ್ರಭುವಿನ ಸೇವಕನು
ನಾನಕನೆ ! ಆ ಸೇವಕ ಉಸಿರುಸಿರಿಗೂ ಜಪಿಸುವನು ॥ 3 ॥

17/4

ತನ್ನ ದಾಸರ ತಪ್ಪನ್ನು ಕರೆಯಿಂದ ಮುಚ್ಚುವನು
ತನ್ನ ಸೇವಕನ ಮಾನ ಕಾಪಾಡುವನು
ತನ್ನ ದಾಸನಿಗೆ ತೋರುವನು ತನ್ನ ಮಹಿಮೆಯನು
ತನ್ನ ಸೇವಕನಿಂದ ಮಾಡಿಸುವನು ನಾಮ ಜಪವನ್ನು
ತನ್ನ ಸೇವಕನ ಗೌರವ ತಾನೇ ಕಾಪಾಡುವನು
ಅವನ ಗತಿ ಮಿತಿಯನ್ನು ಯಾರೂ ಅರಿಯಲಾರರು
ಅವನ ಸೇವಕನ ಸಮಾನ ಯಾರೂ ಬರಲಾರರು
ಪ್ರಭುವಿನ ಸೇವಕನು ಉನ್ನತರಿಗಿಂತ ಉನ್ನತನು
ಪ್ರಭು ತನ್ನ ಸೇವೆಯಲಿ ಮೂಡಿಸಿದವರನ್ನು
ಹೇ ನಾನಕ ! ಆ ಸೇವಕನು ಹತ್ತು ದಿಕ್ಕಿನಲ್ಲಿ ಪ್ರಕಟಿಸುವನು ॥ 4 ॥

17/5

ಅತಿ ಸಣ್ಣ ಇರುವೆಯಲ್ಲಿ ದೈವ ಶಕ್ತಿ ಅಡಗಿಹುದು
ಅದು ದೊಡ್ಡ ಸೈನ್ಯವನ್ನು ಭಸ್ಮ ಮಾಡಬಲ್ಲದು
ಅದರ ಉಸಿರನೆಂದೂ ಸ್ವಯಂ ತಾನೇ ನಿಲ್ಲಿಸನು
ಅದಕೆ ತನ್ನ ಹಸ್ತವಿತ್ತು ತನ್ನಲ್ಲೆ ಇರಿಸುವನು
ಅನೇಕ ರೀತಿ ನೀತಿಗಳಲಿ ಸ್ವಪ್ರಯತ್ನ ಮಾಡುವನು
ತನ್ನ ಕೆಲಸವನ್ನು ತಾನೆ ವ್ಯರ್ಥ ಮಾಡಿ ಬಿಡುವನು
ಅಳಿಸುವನು, ಉಳಿಸುವನವನೆ ಇರನು ಮತ್ತೊಬ್ಬನು
ಸರ್ವ ಜೀವಿಗಳನ್ನು ಇರಿಸುವನು ಇನೊ ಂ
ಎಲೆ ಜೀವ ! ಯೋಚಿಸುತಿರುವೆ ನೀನೇನನ್ನು ?
ನಾನಕನೆನುವನು ಸ್ಮರಿಸು ಕಂಡರಿಯದ ಪ್ರಭುವನ್ನು ॥ 5 ॥

17/6

ಬಾರಂಬಾರ್ ಬಾರ್ ಪ್ರಭು ಜಪೀಐ
ಪೀ ಅಂಮ್ರಿತ್ ಇಹ್ ಮನ್ ತನ್ ಧ್ರಪೀಐ
ನಾಮ್ ರತನ್ ಜಿನಿ ಗುರ್‌ಮುಖಿ ಪಾಇಆ
ತಿಸು ಕಿಛು ಅವ್‌ರ್ ನಾಹೀ ದ್ರಿಸ್ಟಾಇಆ
ನಾಮ್ ಧನ್ ನಾಮೋ ರೂಪ್ ರಂಗ್
ನಾಮೋ ಸುಖ್ ಹರಿ ನಾಮ್ ಕಾ ಸಂಗ್
ನಾಮ್ ರಸಿ ಜೋ ಜನ್ ತ್ರಿಪ್‌ತಾನೇ
ಮನ್ ತನ್ ನಾಮ್ ಹಿ ನಾಮಿ ಸಮಾನೇ
ಊಠತ್ ಬೈಠತ್ ಸೋವತ್ ನಾಮ್
ಕಹ್ ನಾನಕ್ ಜನ್ ಕೈ ಸದ್ ಕಾಮ್ ॥ 6 ॥

17/7

ಬೋಲ್ ಜಸ್ ಜಿಹಬಾ ದಿನ್ ರಾತಿ
ಪ್ರಭಿ ಅಪನೈ ಜನ್ ಕೀನೀ ದಾತಿ
ಕರ್‌ಹಿ ಭಗತಿ ಆತಮ್ ಕೈ ಚಾಇ
ಪ್ರಭ್ ಅಪನೇ ಸಿಉ ರಹಹಿ ಸಮಾಇ
ಜೋ ಹೋಆ ಹೋವತ್ ಸೋ ಜಾನೈ
ಪ್ರಭ್ ಅಪನೇ ಕಾ ಹುಕಮ್ ಪಛಾನೈ
ತಿಸ್ ಕೀ ಮಹಿಮಾ ಕಉನ್ ಬಖಾನೆ
ತಿಸ್ ಕಾ ಗುನ್ ಕಹಿ ಏಕ್ ನ ಜಾನೆ
ಆಠ್ ಪಹರ್ ಪ್ರಭ್ ಬಸಹಿ ಹಜೂರೇ
ಕಹ್ ನಾನಕ್ ಸೇಈ ಜನ್ ಪೂರೇ ॥ 7 ॥

17/8

ಮನ್ ಮೇರೆ ತಿನ್ ಕೀ ಓಟ್ ಲೇಹಿ
ಮನ್ ತನ್ ಅಪನಾ ತಿನ್ ಜನ್ ದೇಹಿ

17/6

ಮತ್ತೆ ಮತ್ತೆ ಪ್ರಭುವಿನ ನಾಮ ಜಪಿಸಿರಿ
ಅಮೃತ ಪಾನ ಮಾಡಿ ಮನವ ತೃಪ್ತಿಗೊಳಿಸಿರಿ
ರತ್ನದಂಥ ನಾಮವನ್ನು ಗಳಿಸಿರುವ ಗುರುಮುಖ
ಮತ್ತೇನೂ ನೋಡಲಿರದ ದೃಷ್ಟಿಯಲ್ಲಿರುವ ಸುಖ
ಹರಿನಾಮ ಐಶ್ವರ್ಯ, ವರ್ಣಮಯ ಸೌಂದರ್ಯ,
ಪ್ರಭು ಸಂಗದೊಡನೆ ಸುಖ, ಹರಿ ನಾಮ ಭಾಗ್ಯ
ಹರಿನಾಮ ರಸದಲ್ಲಿ ತೃಪ್ತನಾದ ಭಕ್ತನ
ತನು ಮನದಲಿ ನಾಮವೇ ನಾಮದಲಿ ಲೀನ
ಕುಳಿತಾಗ, ನಿಂತಾಗ ನಿದ್ರೆಯಲು ಹರಿನಾಮ ಸ್ಮರಣೆ
ನಾನಕನೆನುವನು, ಭಕ್ತನಿಗೆ ಇದೊಂದೇ ಕರ್ಮಾಚರಣೆ ॥ 6 ॥

17/7

ನುಡಿ ನಾಲಗೆ ಹಗಲಿರುಳು ಪ್ರಭು ಯಶವನ್ನು
ತನ್ನ ದಾಸನಿಗಿತ್ತಿರುವನು ಪ್ರಭು ಬಹುಮಾನವನು
ಪ್ರಭುವನಾರು ಹೃದಯದಿಂದ ಪ್ರಾರ್ಥಿಸುವರೋ
ಅವರವರ ಪ್ರಭುವಿನೊಡನೆ ಸೇರಿ ಹೋಗುವರು
ಹಿಂದು ಇಂದಿನದೆಲ್ಲ ಅರಿತಿರುವನನ್ನು
ತನ್ನ ಪ್ರಭು ಆಜ್ಞೆಯನು ಅರಿತಿರುವನು
ಹೇಗೆಂದು ಬಣ್ಣಿಸಲಿ ನಾನವನ ಮಹಿಮೆಯನು
ಅವನ ಒಂದು ಗುಣವನೂ ಹೇಳಲು ನಾ ತಿಳಿಯೆನು
ಎಂಟು ಪ್ರಹರವೂ ಪ್ರಭುವಿನೆಡೆ ಕುಳಿತಿರುವನನು
ನಾನಕನೆನುವನು ಅವನೇ ಪೂರ್ಣ ಭಕ್ತನು ॥ 7 ॥

17/8

ಓ ಎನ್ನ ಮನವೆ, ಪಡೆ ನೀನಾತನ ಆಸರೆಯನ್ನು
ನೀಡು ಆ ಭಕ್ತನಿಗೆ, ನಿನ್ನ ತನು ಮನವನ್ನು

ಜಿನಿ ಜನಿ ಅಸ್‌ನಾ ಪ್ರಭೂ ಪಛಾತಾ
ಸೋ ಜನ್ ಸರಬ್ ಥೋಕ್ ಕಾ ದಾತಾ
ತಿಸ್ ಕೀ ಸರನಿ ಸರಬ್ ಸುಖ್ ಪಾವಹಿ
ತಿಸ್ ಕೈ ದರಸಿ ಸಭ್ ಪಾಪ್ ಮಿಟಾವಹಿ
ಅವರ್ ಸಿಆನಪ್ ಸಗಲೀ ಛಾಡು
ತಿಸು ಜನ್ ಕೀ ತೂ ಸೇವಾ ಲಾಗು
ಆವನ್ ಜಾನು ನ ಹೋವೀ ತೇರಾ
ನಾನಕ್ ತಿಸು ಜನ್ ಕೇ ಪೂಜಾ ಸದ್ ಪೈರಾ ॥ 8 ॥

ಸಲೋಕು :

ಸತಿ ಪುರಖ್ ಜಿನಿ ಜಾನಿಆ
ಸತಿ ಗುರು ತಿಸ್ ಕಾ ನಾಉ
ತಿಸ್ ಕೈ ಸಂಗಿ ಸಿಖ್ ಉಧರೈ
ನಾನಕ್ ಹರಿ ಗುನ್ ಗಾಉ

ಅಸಟ್‌ಪದಿ—18

ಸತಿಗುರು ಸಿಖ್ ಕೀ ಕರೈ ಪ್ರತಿಪಾಲ್
ಸೇವಕ್ ಕಉ ಗುರು ಸದಾ ದಯಾಲ್
ಸಿಖ್ ಕೀ ಗುರು ದುರ್‌ಮತಿ ಮಲ್ ಹಿರೈ
ಗುರು ಬಚನೀ ಹರಿ ನಾಮ್ ಉಚರೈ
ಸತಿಗುರು ಸಿಖ್ ಕೇ ಬಂಧನ್ ಕಾಟೈ
ಗುರ್ ಕಾ ಸಿಖ್ ಬಿಕಾರ್ ತೇ ಹಾಟೈ
ಸತಿಗುರು ಸಿಖ್ ಕಉ ನಾಮ್ ಧನು ದೇಇ
ಗುರ್ ಕಾ ಸಿಖು ಒಡ್ ಭಾಗೀ ಹೋಇ
ಸತಿಗುರು ಸಿಖ್ ಕಾ ಹಲತು ಪಲತು ಸವಾರೈ
ನಾನಕ್ ಸತಿಗುರು ಸಿಖ್ ಕಉ ಜೀಅ ನಾಲಿ ಸವಾರೈ ॥ 1 ॥

ಯಾರು ತನ್ನ ಪ್ರಭುವನ್ನು ಗುರುತಿಸಿರುವನೋ
ಆತನೆಲ್ಲಾ ಪದಾರ್ಥಗಳನು ಅರ್ಪಿಸುವವನು
ಆತನ ಶರಣಾಗಲು ಸಕಲ ಸೌಖ್ಯ ಲಭಿಸುವುದು
ಆತನ ದರ್ಶನದಿಂದ ಸಕಲ ಪಾಪ ಹರಿಯುವುದು
ಮತ್ತೆ ಸಂಕುಚಿತವನೆಲ್ಲ ಬಿಟ್ಟು ಬಿಡು
ಆ ಭಕ್ತರೊಡನೆ ನೀ ಸೇವಾನಿರತನಾಗಿಬಿಡು
ನಿನ್ನ ಹೋಗಿ ಬರುವುದೆಲ್ಲ ನಿಂತು ಹೋಗುವುದು
ನಾನಕನೆ, ಆ ಭಕ್ತನ ಪಾದ ಪೂಜಾರ್ಹವಾದುದು ॥ 8 ॥

ಶ್ಲೋಕ :

ಯಾರು ಅಕಾಲಪುರುಷನ ತಿಳಿದಿಹನೋ
ಅವನೇ ಸದ್ಗುರುವೆನಿಸುವನು
ಅವನೊಂದಿಗೆ ಹರಿಗುಣ ಭಕ್ತನು ಹಾಡಿ
ನಾನಕನೆ, ಮುಕ್ತನಾಗುವನವನು

ಅಷ್ಟಪದಿ—18

ಸದ್ಗುರು ತನ್ನ ಭಕ್ತರ ಪ್ರತಿಪಾಲನು
ಗುರು ತನ್ನ ಸೇವಕರಿಗೆ ಸದಾ ದಯಾಶೀಲನು
ಗುರು ತನ್ನ ಭಕ್ತನ ಮನದ ಕೊಳೆ ತೆಗೆಯುವನು
ಗುರು ವಚನದಿಂದ ಹರಿನಾಮ ಉಚ್ಚರಿಸುವನು
ಭಕ್ತನನು ಸದ್ಗುರು ಬಂಧನದಿಂದ ಬಿಡಿಸುವನು
ಗುರು ಭಕ್ತನು ಕೆಟ್ಟವರಿಂದ ದೂರ ಸರಿಯುವನು
ತನ್ನ ಭಕ್ತನಿಗೆ ಸದ್ಗುರು ನಾಮಧನ ನೀಡುವನು
ಗುರು ಭಕ್ತನು ಅತಿ ಭಾಗ್ಯಶಾಲಿಯಾದವನು
ಗುರು ತನ್ನ ಭಕ್ತನಿಗೆ ಇಹ ಪರ ಸರಿಪಡಿಸುವನು
ನಾನಕನೆ, ಸದ್ಗುರು ಭಕ್ತನನು ಮನದಿಂ ನೋಡಿಕೊಳ್ಳುವನು ॥ 1 ॥

 

18/2

ಗುರು ಕೈ ಗ್ರಿಹಿ ಸೇವಕ್ ಜೋ ರಹೈ
ಗುರ್ ಕೀ ಆಗಿಆ ಮನ್ ಮಹಿ ಸಹೈ
ಆಪಸ್ ಕಉ ಕರಿ ಕಛು ನ ಜನಾವೈ
ಹರಿ ಹರಿ ನಾಮ್ ರಿದೈ ಸದ್ ಧ್ಯಾವೈ
ಮನ್ ಬೇಚೈ ಸತಿ ಗುರ್ ಕೈ ಪಾಸಿ
ತಿಸು ಸೇವಕ್ ಕೆ ಕಾರಜ್ ರಾಸಿ
ಸೇವಾ ಕರತ್ ಹೋಇ ನಿಹ್‌ಕಾಮೀ
ತಿಸ್ ಕಉ ಹೋತ್ ಪರಾಪತಿ ಸ್ವಾಮೀ
ಅಪನೀ ಕ್ರಿಪಾ ಜಿಸು ಆಪಿ ಕರೇಇ
ನಾನಕ್ ಸೋ ಸೇವಕ್ ಗುರ್ ಕೀ ಮತಿ ಲೇಇ ॥ 2 ॥

18/3

ಬೀಸ್ ಬಿಸವೇ ಗುರ್ ಕಾ ಮನು ಮಾನೈ
ಸೋ ಸೇವಕ್ ಪರ್‌ಮೇಸುರ್ ಕೀ ಗತಿ ಜಾನೈ
ಸೋ ಸತಿಗುರು ಜಿಸು ರಿದೈ ಹರಿ ನಾಉ
ಅನಿಕ್ ಬಾರ್ ಗುರ್‌ಕಉ ಬಲಿ ಜಾಉ
ಸರಬ್ ನಿದಾನ್‌ಜೀಅ ಕಾ ದಾತಾ
ಆಠ್ ಪಹರ್ ಪಾರ್‌ಬ್ರಹಮ್ ರಂಗಿ ರಾತಾ
ಬ್ರಹಮ್ ಮಹಿ ಜನ್ ಜನ್ ಮಹಿ ಪಾರಬ್ರಹಮ್
ಏಕ್‌ಹಿ ಆಪಿ ನಹೀ ಕಛು ಭರಮ್
ಸಹಸ್ ಸಿಆನಪ್ ಲಇಆ ನ ಜಾಈಐ
ನಾನಕ್ ಐಸಾ ಗುರು ಬಡ್‌ಭಾಗೀ ಪಾಈಐ ॥ 3 ॥

18/4

ಸಫಲ್ ದರ್‌ಸನ್ ಪೇಖತ್ ಪುನೀತ್
ಪರ್‌ಸತ್ ಚರನ್ ಗತಿ ನಿರ್‌ಮಲ್ ರೀತಿ
ಭೇಟತ್ ಸಂಗಿ ರಾಮ್ ಗುನ್ ರವೇ
ಪಾರಬ್ರಹಮ್ ಕೀ ದರ್‌ಗಹ್ ಗವೇ

## 18/2

ಗುರು ಗೃಹದೊಳಿರುವ ಸೇವಕನು
ಮನದಿಂದ ಪಾಲಿಸಬೇಕು ಗುರುವಾಜ್ಞೆಯನು
ತನ್ನತನದ ಬಿಂಕ ಬಿನ್ನಾಣ ತೋರಬೇಕಾಗಿಲ್ಲ
ಹರಿನಾಮ ಹೃದಯದಲಿ ಇದ್ದರಾಯಿತೆಲ್ಲ
ಯಾರು ತನ್ನಾತ್ಮವನು ಸದ್ಗುರುವಿಗೆ ಮಾರುವನೋ
ಆ ಸೇವಕನ ಕೆಲಸಗಳನು ಸರಿಯಾಗಿಸುವವನು
ಸೇವೆ ಸಲಿಸಿ ತಾನು ಮಾಡಲಿಲ್ಲವೆನುವವನಿಗೆ
ಪ್ರಭುವೇ ಒಲಿದು ಬರುವನವನಿಗೆ
ಸದ್ಗುರು ಭಕ್ತನಿಗೆ ಇಹಪರದಲ್ಲಿ ಕೃಪೆದೋರುವನು
ನಾನಕ ಸದ್ಗುರುವಿಗೆ ಭಕ್ತನು ಹೃದಯದಿಂದ ಸೇವಿಸುವನು ॥ 2 ॥

## 18/3

ಯಾವ ಸೇವಕನು ತನ್ನ ಗುರುವನರಿತಿಹನೋ
ಅವನರಿತಿಹನು ತನ್ನ ಗುರು ಪರಿಶ್ರಮಗಳನು
ಹೃದಯದಲಿ ಹರಿನಾಮವಿರುವವರ ಗುರುವಿಗೆ
ಬಲಿಯಾಗುವೆನು ಚಿರಕಾಲ ನಾ ನಾ ಗುರುವಿಗೆ
ಗುರುವೆ ಕೋಶಾಧ್ಯಕ್ಷ, ಜೀವ ನೀಡುವನವನು
ಎಂಟು ಪ್ರಹರ ತಾನೂ ಬ್ರಹ್ಮನಂತೆ ವರ್ಣರಂಜಿತನು
ಬ್ರಹ್ಮನಲಿ ಭಕ್ತನಿಹನು, ಭಕ್ತನಲಿ ಪರಬ್ರಹ್ಮನು
ಒಬ್ಬನೇ ಸ್ವಯಂಭೂ – ಇದರಲ್ಲಿ ಭ್ರಮೆ ಇಲ್ಲವೇನೂ
ಅನೇಕ ಮೈ ಮುರಿತ ಯತ್ನಕೂ ಸಿಗದವನು
ನಾನಕ ಅತಿ ಅದೃಷ್ಟಶಾಲಿಗೆ ಇಂಥಾ ಗುರು ಸಿಗುವನು ॥ 3 ॥

## 18/4

ಅತಿ ಪವಿತ್ರ ಅತಿ ಫಲಕಾರಿ ಗುರು ದರ್ಶನ
ಅತಿ ನಿರ್ಮಲ ರೀತಿ ಗುರು ಚರಣ ಸ್ಪರ್ಶನ
ಸತ್ಸಂಗದಲಿ ಸೇರಿ ರಾಮನ ಗುಣ ಹಾಡುವರು
ಪರಮೇಶನ ಉತ್ಸವಗಳಲಿ ಉಚ್ಛ ಸ್ಥಾನ ಗಳಿಸುವರು

 

ಸುನಿಕರಿ ಬಚನ್ ಕರನ್ ಅಘಾನೇ
ಮನಿ ಸಂತೋಖ್ ಆತಮ್ ಪತಿಆನೇ
ಪೂರಾ ಗುರು ಅಖ್ಯೆರೀ ಜಾಕಾ ಮಂತ್ರ್
ಅಂಮ್ರಿತ್ ದ್ರಿಸ್‌ಟಿ ಪೇಖೈ ಹೋಇ ಸಂತ್
ಗುಣ್ ಬಿ ಅಂತ್ ಕೀಮತಿ ನಹೀ ಪಾಇ
ನಾನಕ್ ಜಿಸ್ ಭಾವೈ ತಿಸ್ ಲಏ ಮಿಲಾಇ ॥ 4 ॥

18/5

ಜಿಹಬಾ ಏಕ್ ಉಸ್‌ತತಿ ಅನೇಕ್
ಸತಿ ಪೂರಖ್ ಪೂರನ್ ಬಿಬೇಕ್
ಕಾಹೂ ಬೋಲ್ ನ ಪಹುಚತ್ ಪ್ರಾನೀ
ಅಗಮ್ ಅಗೋಚರ್ ಪ್ರಭ್ ನಿರ್‌ಬಾನೀ
ನಿರಾಹಾರ್ ನಿರ್‌ವೈರ್ ಸುಖ್‌ದಾಈ
ತಾ ಕೀ ಕೀಮತಿ ಕಿನೈ ನ ಪಾಈ
ಅನಿಕ್ ಭಗತ್ ಬಂದನ್ ನಿತ್ ಕರ್ ಹಿ
ಚರನ್ ಕಮಲ್ ಹಿರ್‌ದೈ ಸಿಮರಹಿ
ಸದ್ ಬಲಿಹಾರೀ ಸತಿ ಗುರ್ ಅಪ್‌ನೇ
ನಾನಕ್ ಜಿಸು ಪ್ರಸಾದಿ ಐಸಾ ಪ್ರಭು ಜಪ್‌ನೇ ॥ 5 ॥

18/6

ಇಹ್ ಹರಿ ರಸ್ ಪಾವೈ ಜನ್ ಕೋಇ
ಅಂಮ್ರಿತ್ ಪಾವೈ ಅಮರ್ ಸೋ ಹೋಇ
ಉಸ್ ಪುರಖ್ ಕಾ ನಾಹಿ ಕದೇ ಬಿನಾಸ್
ಜಾ ಕೈ ಮನಿ ಪ್ರಗಟೇ ಗುನ್‌ತಾಸ್
ಆಠ್ ಪಹರ್ ಹರಿ ಕಾ ನಾಮ್ ಲೇಇ
ಸಚ್ ಉಪ್‌ದೇಸ್ ಸೇವಕ್ ಕಉ ದೇಇ

ಅವನ ವಚನಗಳ ಕೇಳಿ ಕರ್ಣಾನಂದವಾಗುವುದು
ಮನದಲ್ಲಿ ಸಂತೋಷ, ಆತ್ಮ ತೃಪ್ತಿ ಲಭಿಸುವುದು
ಸದ್ಗುರು ಅವನೇ ಹರಿನಾಮದ ಮನ ಉಳ್ಳವನು
ಅಂತಹ ಗುರುವಿಗೆ ನಾನು ನನ್ನಾತ್ಮವ ಬಲಿಗೊಡುವೆನು
ಅವನ ಗುಣ ಅನಂತ, ಅರಿಯರಾರೂ ಅದರ ಬೆಲೆಯನ್ನು
ನಾನಕನೆ, ಹಿಡಿದುದನು ತನ್ನೊಡನಿಟ್ಟುಕೊಳ್ಳುವನು ॥ 4 ॥

18/5

ನರನ ನಾಲಗೆ ಏಕ, ಪ್ರಭು ಸ್ತುತಿ ಅನೇಕ
ಆ ಸತ್ಪುರುಷ ಪರಿಪೂರ್ಣ ಸರ್ವವ್ಯಾಪಕ
ಯಾರ ಮಾತಿಗೂ ಎಟುಕದ ಪ್ರಾಣಿ
ಅಗಮ ಅಗೋಚರ ಪ್ರಭು ನಿರ್ವಾಣ
ನಿರಾಹಾರಿ, ನಿರ್ವೈರಿ, ಸುಖದ ಕಲ್ಪತರು
ಅವನನಾರೂ ಬೆಲೆಗಟ್ಟಿ ಕೊಳ್ಳಲಾರರು
ಅನೇಕ ಭಕ್ತರವನ ನಿತ್ಯ ನಮಸ್ಕರಿಸುವರು
ಅವನ ಚರಣ ಕಮಲವನು ಹೃದಯದಲಿ ಸ್ಮರಿಸುವರು
ಸದ್ಗುರುವಿಗೆ ನನ್ನ ನಾ ಬಲಿಗೊಡುವೆನು
ಹೇ ನಾನಕ, ಅವನ ಕೃಪೆಯಿಂದ ಅಂತಹ ಪ್ರಭುವನ್ನು ಸ್ಮರಿಸುವೆನು

18/6

ಈ ಹರಿ ರಸವನು ಭಕ್ತನು ಪಡೆಯುವನು
ಕುಡಿಯುವನಮೃತವನು, ಅಮರನಾಗುವನು
ಆ ಪುರುಷನೆಂದೂ ನಾಶವಾಗನು
ಅವನ ಮನ ಪ್ರಕಟಿಸುವುದು ಗುಣ ಭಂಡಾರವನು
ಅವನು ಎಂಟು ತಾಸು ಹರಿನಾಮ ಜಪಿಸುವನು
ಸೇವಕನಿಗೆ ಸದಾ ಸತ್ಯೋಪದೇಶ ಮಾಡುವನು

ಮೋಹ್ ಮಾಯಾ ಕೈ ಸಂಗಿ ನ ಲೇಪ್
ಮನ್ ಮಹಿ ರಾಖೈ ಹರಿ ಹರಿ ಏಕ್
ಅಂಧ್‌ಕಾರ್ ದೀಪಕ್ ಪರ್‌ಗಾಸೇ
ನಾನಕ್ ಭರಮ್ ಹೋಹ್ ದುಖ್ ತಹ್ ತೇ ನಾಸೇ ॥ 6 ॥

18/7

ತಸ್‌ತಿ ಮಾಹಿ ಠಾಢಿ ವರ್‌ತಾಈ
ಅನದ್ ಭಯಾ ದುಖ್ ನಾಠೇ ಭಾಈ
ಜನಮ್ ಮರನ್ ಕೇ ಮಿಟೇ ಅಂದೇಸೇ
ಸಾಧೂ ಕೆ ಪೂರನ್ ಉಪ್‌ದೇಸೇ
ಭಯ್ ಚೂಕಾ ನಿರ್‌ಭಯ್ ಹೋಇ ಬಸೆ
ಸಗಲ್ ಬಾಧಿ ಮನ್ ತೇ ಖೈ ನಸೆ
ಜಿಸ್‌ಕಾ ಸಾ ತಿನಿ ಕಿರ್‌ಪಾ ಧಾರೀ
ಸಾಧ್ ಸಂಗಿ ಜಪಿ ನಾಮ್ ಮುರಾರೀ
ಥಿತಿ ಪಾಈ ಚೂಕೇ ಭ್ರಮ್ ಗವನ್
ಸುನಿ ನಾನಕ್ ಹರಿ ಹರಿ ಜಸ್ ಸ್ರವನ್ ॥ 7 ॥

18/8

ನಿರ್‌ಗುನ್ ಆಪಿ ಸರ್‌ಗುನ್ ಭಿ ಓಹೀ
ಕಲಾಧಾರಿ ಜಿನಿ ಸಗಲೀ ಮೋಹೀ
ಅಪನೇ ಚರಿತ್ ಪ್ರಭಿ ಆಪಿ ಬನಾಏ
ಅಪ್‌ನೀ ಕೀಮತಿ ಆಪೇ ಪಾಏ
ಹರಿ ಬಿನ್ ದೂಜಾ ನಾಹೀ ಕೋಇ
ಸರಬ್ ನಿರಂತರಿ ಏಕೋ ಸೋಇ
ಓತಿ ಪೋತಿ ರವಿಆ ರೂಪ್ ರಂಗ್
ಭಏ ಪ್ರಗಾಸ್ ಸಾಧ್ ಕೈ ಸಂಗ್
ರಚಿ ರಚನಾ ಅಪನೀ ಕಲ್ ಧಾರೀ
ಅನಿಕ್ ಬಾರ್ ನಾನಕ್ ಬಲಿಹಾರೀ ॥ 8 ॥

ಮೋಹ ಮಾಯೆಯ ಜೊತೆ ಎಂದೂ ಸೇರನು
ಮನದೊಳಿಡುವನು ಸದಾ ಹರಿಯೊಬ್ಬನನು
ಕತ್ತಲೆಯಲ್ಲಿ ಮಿಣುಕು ಹುಳು ಪ್ರಕಾಶಿಸುವುದು
ನಾನಕನೆ, ಅದರಿಂದ ಮೋಹ, ಭ್ರಮೆ ದುಃಖ ನಾಶವಾಗುವುದು

18/7

ಹರಿ ತಪ್ತ ಹೃದಯದಲ್ಲಿ ತರುವ ಶೀತಲತೆಯನ್ನು
ಹೃದಯಾನಂದವಾಗಿಹುದು ದುಃಖ ದೂರವಾಯಿತಿನ್ನು
ಜನನ ಮರಣಗಳ ಭಯ ನಾಶವಾಯಿತಿನ್ನು
ಸಾಧು ಸಂತರ ಪೂರ್ಣೋಪದೇಶದಿಂದಲಿನ್ನು
ಭಯ ಸಮಾಪ್ತಿ ಆಯಿತು, ನಿರ್ಭಯ ಆವಾಸವಾಯಿತು
ವ್ಯಾಧಿಯೆಲ್ಲ ಮನದಿಂದ ಓಡಿ ಹೋಯಿತು
ಯಾರ ಹರಿ ಅವನೋ, ಕೃಪೆದೋರಿದನವನು
ಸಾಧು ಸಂತರೊಡನೆ ಭಜಿಸಿ ಹರಿ ಮುರಾರಿಯನು
ಶಿಲೆಯದಂತೆ ಅಳಿದು ಭ್ರಮೆ ಸ್ಥಿರತೆ ನಿಂತಿದೆ
ಹೇ ನಾನಕ ! ಹರಿ ಯಶವು ಕಿವಿಗಳಿಗೆ ಕೇಳಬರುತಿದೆ ॥ 7 ॥

18/8

ನಿರಾಕಾರನವನು ಮತ್ತು ಸರ್ವ ವ್ಯಾಪಕನು
ಶಕ್ತಿ ಧರಿಸಿ, ಎಲ್ಲ ರಚಿಸಿ, ಮೋಹಿಸಿರುವನು
ತನ್ನ ಚರಿತೆಯನ್ನು ತಾನೇ ರಚಿಸಿಕೊಂಡಿಹನು
ತನ್ನ ಬೆಲೆಯನು ತಾನೇ ಪಡೆದುಕೊಳ್ಳುವನು
ಹರಿಯನ್ನು ಬಿಟ್ಟರೆ ಮತ್ತಾರೂ ಇತರರಿಲ್ಲ
ಎಲ್ಲರಲ್ಲೂ ಇರುವನು ಅವನೊಬ್ಬನೇ ಎಲ್ಲಾ
ಹಾಸು ಹೊಕ್ಕಿನಂತೆ ಅವನ ರೂಪ ವರ್ಣವಾಗಿದೆ
ಸಂತರ ಸಂಗದಲ್ಲಿ ಜಾಜ್ವಲ್ಯಮಾನವಾಗಿದೆ
ನಿರಾಕಾರನವನು ಮತ್ತು ಸರ್ವವ್ಯಾಪಕನು
ಅನೇಕ ಸಲ ನಾನಕ ಶರಣು ಶರಣಾಗುವನು ॥ 8 ॥

ಸಲೋಕು :

ಸಾಥಿ ನ ಚಾಲೈ ಬಿನ್ ಭಜನ್
ಬಿಖಿಆ ಸಗಲೀ ಛಾರು
ಹರಿ ಹರಿ ನಾಮ್ ಕಮಾವ್‌ನಾ
ನಾನಕ್ ಇಹ್ ಧನ್ ಸಾರು

ಅಸಟ್‌ಪದಿ—19

ಸಂತ್ ಜನಾ ಮಿಲಿ ಕರೆ ಬಿಚಾರ್
ಏಕ್ ಸಿಮರಿ ನಾಮ್ ಆಧಾರ್
ಅವರಿ ಉಪಾವ್ ಸಭಿ ಮೀತ್ ಬಿಸಾರಹು
ಚರನ್ ಕಮಲ್ ರಿದ್ ಮಹಿ ಉರಿ ಧಾರಹು
ಕರನ್ ಕಾರನ್ ಸೋ ಪ್ರಭು ಸಮರಥ್
ದ್ರಿಢ್ ಕರಿ ಗಹಹು ನಾಮ್ ಹರಿ ವಥ್
ಇಹ್ ಧನ್ ಸಂಚಹು ಹೋವಹು ಭಗವಂತ್
ಸಂತ್ ಜನಾ ಕಾ ನಿರ್‌ಮಲ್ ಮಂತ್
ಏಕ್ ಆಸ್ ರಾಖಹು ಮನ್ ಮಾಹಿ
ಸರಬ್ ರೋಗ್ ನಾನಕ್ ಮಿಟಿ ಜಾಹಿ ॥ 1 ॥

19/2

ಜಿಸ್ ಧನ್ ಕಉ ಚಾರಿ ಕುಂಟ್ ಉಠಿ ಧಾವಹಿ
ಸೋ ಧನ್ ಹರಿ ಸೇವಾ ತೇ ಪಾವಹಿ
ಜಿಸ್ ಸುಖ್ ಕಉ ನಿತ್ ಬಾಛಹಿ ಮೀತ್
ಸೋ ಸುಖ್ ಸಾಧೂ ಸಂಗಿ ಪರೀತಿ
ಜಿಸ್ ಸೋಭಾ ಕಉ ಕರಹಿ ಭಲೀ ಕರನೀ
ಸಾ ಸೋಭಾ ಭಜ್ ಹರಿ ಕೀ ಸರನೀ

ಶ್ಲೋಕ :

ಭಜನೆಯಲ್ಲದೆ ಜೊತೆಯಲ್ಲಿ ಬೇರೇನೂ ಬಾರದು
ಎಲ್ಲಾ ಮಾಯೆ ; ಬೂದಿಯ ರಾಶಿ ಇದು
ಹರಿ ಹರಿ ನಾಮವ ಸ್ಮರಿಸೆಲೊ ಸ್ಮರಿಸು
ನಾನಕ ಇದುವೇ ಸತ್ಯದ ಧನವಹುದು

ಅಷ್ಟಪದಿ — 19

ಸಂತರೊಡನೆ ಸೇರಿ ಮಾಡು ವಿಚಾರವನು
ನಾಮವನಾಶ್ರಯಿಸಿ ನೀ ನೆನೆ ಹರಿನಾಮವನು
ಮಿತ್ರನೆ ! ಮರೆತುಬಿಡು ಮತ್ತೆಲ್ಲ ಯತ್ನಗಳನು
ಹರಿ ಚರಣ ಕಮಲದೊಳಿಡು ನಿನ್ನ ಮನವನ್ನು
ಮಾಡಲು ಮತ್ತು ಮಾಡಿಸಲು ಪ್ರಭು ಅತಿ ಸಮರ್ಥನು
ಧೃಡತೆಯಿಂದ ಹಿಡಿದಿಡು ಮನದಲಿ ಹರಿನಾಮವನು
ಸಂಚಯಿಸಿ ನಾಮ ಧನವನು ಭಾಗ್ಯವಂತನಾಗು
ಸಂತ ಜನರ ಮನೋಭೀಷ್ಟವಂತನಾಗು
ಇರಲಿ ಒಂದೇ, ಹರಿನಾಮದಾಸೆ ಮನದಲ್ಲಿ
ನಾನಕ, ಸಕಲ ರೋಗ ನಿವಾರಕನವನು ಸುಲಭದಲಿ ॥ 1 ॥

19/2

ಯಾವ ಧನಕೆಂದು ನಾಲ್ಕು ದಿಶೆಯಿಂದ ಎದ್ದೋಡುವರೋ
ಪ್ರಭು ನಾಮ ಜಪದಿಂದ ಆ ಧನವ ಗಳಿಸುವರು
ಮಿತ್ರ ! ದಿನ ನಿತ್ಯ ಸುಖಕೆಂದು ಸದಾ ಬಯಸುವುದು
ಸಂತರನು ಪ್ರೀತಿಸಲು ಅದು ನಿನಗೆ ದೊರಕುವುದು
ನೀನಾವ ಶೋಭೆಗೆಂದು ಸತ್ಕರ್ಮಗಳಲಿ ತೊಡಗುವೆ
ಆ ಶೋಭೆ ಭಜನೆಗೆಂದು ಹರಿಗೆ ನಾ ಶರಣಾಗುವೆ

ಅನಿಕ್ ಉಪಾವೀ ರೋಗ್ ನ ಜಾಇ
ರೋಗ್ ಮಿಟ್ಟೈ ಹರಿ ಅವಖಧ್ ಲಾಇ
ಸರಬ್ ನಿಧಾನ್ ಮಹಿ ಹರಿ ನಾಮ್ ನಿಧಾನ್
ಜಪಿ ನಾನಕ್ ದರ್‌ಗಹಿ ಪರ್‌ವಾನ್ ॥ 2 ॥

19/3

ಮನ್ ಪರ್ ಬೋಧಹು ಹರಿ ಕೈ ನಾಇ
ದಹ್ ದಿಸಿ ಧಾವತ್ ಆನೈ ಠಾಇ
ತಾಕಉ ಬಿಘನ್ ನ ಲಾಗೈ ಕೋಇ
ಜಾಕೈ ರಿದೈ ಬಸೈ ಹರಿ ಸೋಇ
ಕಲಿ ತಾತೀ ಠಾಂಢಾ ಹರಿ ನಾಉ
ಸಿಮಿರಿ ಸಿಮರಿ ಸದಾ ಸುಖ್ ಪಾಉ
ಭಉ ಬಿನಸೈ ಪೂರನ್ ಹೋಇ ಆಸ್
ಭಗತಿ ಭಾಇ ಆತಮ್ ಪರ್‌ಗಾಸ್
ತಿತು ಘರಿ ಜಾಇ ಬಸೈ ಅಬಿನಾಸೀ
ಕಹು ನಾನಕ್ ಕಾಟೀ ಜಮ್ ಫಾಸೀ ॥ 3 ॥

19/4

ತತ್ ಬಿಚಾರ್ ಕಹೈ ಜನು ಸಾಚಾ
ಜನಮಿ ಮರೈ ಸೋ ಕಾಚೋ ಕಾಚಾ
ಆವಾ ಗವನ್ ಮಿಟೈ ಪ್ರಭ್ ಸೇವ್
ಆಪ್ ತ್ಯಾಗಿ ಸರನಿ ಗುರುದೇವ್
ಇಉ ರತನ್ ಜನಮ್ ಕಾ ಹೋಇ ಉಧಾರ್
ಹರಿ ಹರಿ ಸಿಮರಿ ಪ್ರಾನ್ ಅಧಾರ್
ಅನಿಕ್ ಉಪಾವ್ ನ ಛೂಟನ್ ಹಾರೇ
ಸಿಂಮ್ರಿತಿ ಸಾಸತ್ ಬೇದ್ ಬಿಚಾರೇ
ಹರಿ ಕೀ ಭಗತಿ ಕರಹು ಮನ್ ಲಾಇ
ಮನಿ ಬಂಛತ್ ನಾನಕ್ ಫಲ್ ಪಾಇ ॥ 4 ॥

ಅನೇಕಾನೇಕ ಪ್ರಯತ್ನದಿಂದ ಯಾವ ರೋಗ ಗುಣವಾಗದು
ಶ್ರೀಹರಿಯ ಔಷಧದಿಂದ ಆ ರೋಗ ಮಾಯವಾಗುವುದು
ಸಕಲ ಭಂಡಾರಗಳ ಭಂಡಾರ ಹರಿನಾಮವು
ಜಪಿಸು ನಾನಕ, ನಿನ್ನ ಸ್ಥಾನ ದೇವನೊಡ್ಡೋಲಗವು ॥ 2 ॥

19/3

ಹರಿನಾಮದೊಡನೆ ಮನಕ್ಕೆ ತಿಳಿಸುವನು
ಹತ್ತು ದಿಕ್ಕೂ ಅಲೆದಾಡಿ ಸ್ವಸ್ಥಾನ ಸೇರುವನು
ಅವನಿಗೆ ಯಾವ ವಿಘ್ನವೂ ಬರುವುದಿಲ್ಲ
ಅವನ ಹೃದಯದಲ್ಲಿ ಹರಿ ವಾಸಿಸುವನು
ಕಲಿಯುಗ ಕುದಿಯುವುದು, ಶೀತಲವು ಹರಿನಾಮ
ಅವನನ್ನು ಸ್ಮರಿಸುತ್ತ ಅನುಭವಿಸು ಸುಖವನ್ನು
ಭಯ ದೂರವಾಗುವುದು, ಅಭೀಷ್ಟ ಪೂರ್ಣವಾಗುವುದು
ಪ್ರೇಮ ವಿಶ್ವಾಸದಿಂದ ಆತ್ಮಜ್ಯೋತಿ ಬೆಳಗುವುದು
ಆ ಅವಿನಾಶಿಯ ಮನೆಯಲ್ಲಿ ವಾಸವಾಗುವನು
ಹೇ ನಾನಕ ! ಯಮನಿಂದ ಸಾವು ಇಲ್ಲದಾಗುವುದು ॥ 3 ॥

19/4

ಸದ್ಭಕ್ತನು ವಿಚಾರಮಾಡಿ ಮಾತನಾಡುವನು
ಏನೂ ಅರಿಯದವನು ಹುಟ್ಟಿ ಸಾಯುವನು
ಜನನ ಮರಣವನು ನಿಲಿಸುವುದು ಪ್ರಭು ಸೇವೆ
ನಿನ್ನ ನೀ ನಿತ್ಯ ತ್ಯಜಿಸಿ ಬಾ ಮಾಡು ಗುರುಸೇವೆ
ಹೀಗೆ ರತ್ನದಂಥಾ ಬಾಳುವೆ ಉದ್ಧಾರವಾಗುವುದು
ಪ್ರಾಣಾಧಾರದ ಹರಿ ಧ್ಯಾನ ಆಧಾರವಾಗುವುದು
ಅನೇಕ ಪ್ರಯತ್ನದಿಂದಲೂ ಬಿಡುಗಡೆಯೆ ಇಲ್ಲ
ವೇದ ಶಾಸ್ತ್ರ ಸ್ಮೃತಿಗಳಿಂದ ಹಾದಿ ದೊರಕಲಿಲ್ಲ
ಮನ ಬಿಚ್ಚಿ ಹರಿ ಭಜನೆ ಮಾಡಿದರಾಗುವುದು
ಹೇ ನಾನಕ, ಮನಕೆ ಬೇಕಾದ ಫಲ ಆಗ ದೊರಕುವುದು ॥ 4 ॥

19/5

ಸಂಗಿ ನ ಚಾಲಸಿ ತೇರೈ ಧನಾ
ತೂ ಕಿಆ ಲಪಟಾವಹಿ ಮೂರಖ್ ಮನಾ
ಸುತ್ ಮಿತ್ ಕುಟಂಬ್ ಅವ್‌ರ್ ಬನಿತಾ
ಇನ್ ತೆ ಕಹೋ ತುಮ್ ಕವನ್ ಸನಾಥಾ
ರಾಜ್ ರಂಗ್ ಮಾಯಾ ಬಿಸ್‌ಥಾರ್
ಇನ್ ತೇ ಕಹೊ ಕವನ್ ಛುಟ್‌ಕಾರ್
ಅಸು ಹಸ್‌ತೀ ರಥ್ ಅಸವಾರೀ
ಝೂಠಾ ಡಂಕು ಝೂಠಾ ಪಾಸಾರೀ
ಜಿನಿ ದೀಏ ತಿಸು ಬುಝೈ ನ ಬಿಗಾನಾ
ನಾಮು ಬಿಸಾರಿ ನಾನಕ್ ಪಛ್‌ತಾನಾ ॥ 5 ॥

19/6

ಗುರ್ ಕೀ ಮತಿ ತೂ ಲೇಹಿ ಇಆನೇ
ಭಗತಿ ಬಿನಾ ಬಹು ಡೂಬೇ ಸಿಆನೇ
ಹರಿ ಕೀ ಭಗತಿ ಕರಹು ಮನ್ ಮೀತ್
ನಿರ್‌ಮಲ್ ಹೋಇ ತುಮ್ಹಾರೋ ಚೀತ್
ಚರನ್ ಕಮಲ್ ರಾಖಹು ಮನ್ ಮಾಹಿ
ಜನಮ್ ಜನಮ್ ಕೇ ಕಿಲಬಿಖ್ ಜಾಹಿ
ಆಪಿ ಜಪಹು ಅವರಾ ನಾಮು ಜಪಾವಹು
ಸುನತ್ ಕಹತ್ ರಹತ್ ಗತಿ ಪಾವಹು
ಸಾರ್ ಭೂತ್ ಸತಿ ಹರಿಕೋ ನಾಉ
ಸಹಜಿ ಸುಭಾಇ ನಾನಕ್ ಗುನ್ ಗಾಉ ॥ 6 ॥

19/7

ಗುನ್ ಗಾವತ್ ತೇರೀ ಉತರ್‌ಸಿ ಮೈಲು
ಬಿನಸಿ ಜಾಇ ಹಉಮೈ ಬಿಖು ಫೈಲು
ಹೋಹಿ ಅಚಿಂತು ಬಸೈ ಸುಖ್‌ನಾಲಿ
ಸಾಸಿ ಗ್ರಾಸಿ ಹರಿ ನಾಮು ಸಮಾಲಿ

ನಾಲ್ಕು ವಸ್ತುಗಳೊಡನೆ ಆತ್ಮ ಕಮಲ ಪ್ರಜ್ವಲ
ಎಲ್ಲದರೊಳಿದ್ದರೂ ಅವನೆಲ್ಲಿಯೂ ಇಲ್ಲ
ಸುಂದರ ಚತುರ ತತ್ವಜ್ಞಾನಿ ಅವನು
ಸಮದರ್ಶಿ ಸತ್ಯ ಒಂದಾಗಿಸಿ ಕಾಣುವನು
ಫಲ ನಿನಗೆ ದೊರಕುವುದು ಸುಖಮಣಿಯು ಹಾಡಲು
ನಾನಕನ ಹರಿನಾಮ ವಚನ ಹೃದಯದಿಂದ ಕೇಳಲು ॥ 6 ॥

24/7

ಈ ನಾಮ ಭಂಡಾರವನು ಮನದಿಂದ ಜಪಿಸುವರು
ಎಲ್ಲಾ ಯುಗಗಳಲು ಸದ್ಗತಿಯ ಹೊಂದುವರು
ಗುಣ ಗೋವಿಂದನ ನಾಮಧ್ವನಿ ವಾಣಿಯನು
ಸ್ಮೃತಿ ಶಾಸ್ತ್ರ ವೇದ ಮಾಡುವುದು ವ್ಯಾಖ್ಯಾನವನು
ಸಕಲ ಮತಗಳ ಅಂತ ಕೇವಲ ಹರಿನಾಮವು
ಗೋವಿಂದನ ಭಕ್ತರ ಮನದ ವಿಶ್ರಾಮವು
ಕೋಟಿ ಅಪರಾಧ ಸಾಧು ಸಂಗದಲಿ ನಾಶವಾಗುವುದು
ಸಾಧು ಸಂತರ ಕೃಪೆ ಯಮನಿಂದ ಪಾರುಮಾಡುವುದು
ಯಾರ ಮಸ್ತಕದಲ್ಲಿ ಪ್ರಭು ಸತ್ಕರ್ಮ ಬರೆದಿಹನೋ
ನಾನಕನೆ ! ಆ ಸಂತರ ಶರಣು ಹೊಂದಿರುವನು ॥ 7 ॥

24/8

ಯಾರ ಮನದಲ್ಲಿ ವಾಸಿಸಿ ಪ್ರೀತಿಯಿಂದ ಕೇಳುವನೋ
ಆ ಸೇವಕನನ್ನು ಹರಿ ಪ್ರಭುವು ಜ್ಞಾಪಿಸಿಕೊಳ್ಳುವನು
ಆತನ ಜನನ ಮರಣಗಳ ದುಃಖ ನಿವಾರಿಸುವನು
ದುರ್ಲಭ ಶರೀರವನ್ನು ತತ್ಕಾಲಕ್ಕೆ ಉದ್ಧರಿಸುವನು
ಅವನ ಶೋಭೆಯು ನಿರ್ಮಲತೆ ಅಮೃತದ ಪವಿತ್ರ ವಾಣಿ
ಒಬ್ಬನ ನಾಮ ಆತನ ಮನದಲ್ಲಿ ನೆಲೆಸಿಸುದು
ಅವನ ದುಃಖ ರೋಗ ಭಯ ಭ್ರಮೆ ನಾಶವಾಗುವುದು
ಅವನ ನಾಮ ಸಂತರೊಡನೆ ಕೆಲಸ ಪವಿತ್ರವಾದುದು
ಎಲ್ಲರಿಗಿಂತ ಉತ್ತಮವಾದ ಮಹಿಮೆ ಅವನದಾಗುವುದು
ಹೇ ನಾನಕ ! ಸುಖಮಣಿಯು ಹೆಸರಿಗೆ ಈ ಗುಣವಿರುವುದು ॥ 8 ॥

ಚಾರಿ ಪದಾರಥ್ ಕಮಲ್ ಪ್ರಗಾಸ್
ಸಭ್ ಕೈ ಮಧಿ ಸಗಲ್ ತೇ ಉದಾಸ್
ಸುಂದರ್ ಚತುರ್ ತತ್ ಕಾ ಬೇತಾ
ಸಮದರಸೀ ಏಕ್ ದ್ರಿಸ್‌ಟೇತಾ
ಇಹ್ ಫಲ್ ತಿಸು ಜನ್ ಕೈ ಮುಖಿ ಭನೇ
ಗುರು ನಾನಕ್ ನಾಮ್ ಬಚನ್ ಮನಿ ಸುನೇ ॥ 6 ॥

24/7

ಇಹ್ ನಿಧಾನ್ ಜಪೈ ಮನಿ ಕೋಇ
ಸಭ್ ಜುಗ್ ಮಹಿ ತಾಕೀ ಗತಿ ಹೋಇ
ಗುಣ್ ಗೋವಿಂದ್ ನಾಮ್ ಧುನಿ ಬಾಣೀ
ಸಿಮ್ರಿತಿ ಸಾಸ್‌ತ್ರ ಬೇದ್ ಬಖಾಣೀ
ಸಗಲ್ ಮತಾಂತ್ ಕೇವಲ್ ಹರಿ ನಾಮ್
ಗೋವಿಂದ್ ಭಗತ್ ಕೈ ಮನಿ ಬಿಸ್ರಾಮ್
ಕೋಟಿ ಅಪ್ರಾಧ್ ಸಾಧ್ ಸಂಗಿ ಮಿಟೈ
ಸಂತ್ ಕ್ರಿಪಾ ತೇ ಜಮ್ ತೇ ಛುಟೈ
ಜಾಕೈ ಮಸ್‌ತಕಿ ಕರಮ್ ಪ್ರಭಿ ಪಾಏ
ಸಾಧ್ ಸರಣಿ ನಾನಕ್ ತೇ ಆಏ ॥ 7 ॥

24/8

ಜಿಸು ಮನಿ ಬಸೈ ಸುನೈ ಲಾಇ ಪ್ರೀತಿ
ತಿಸು ಜನ್ ಆವೈ ಹರಿ ಪ್ರಭು ಚೀತಿ
ಜನಮ್ ಮರಣ್ ತಾ ಕಾ ದೂಖ್ ನಿವಾರೈ
ದುರ್ಲಭ್ ದೇಹ್ ತತ್‌ಕಾಲ್ ಉಧಾರೈ
ನಿರ್‌ಮಲ್ ಸೋಭಾ ಅಂಮ್ರಿತ್ ತಾ ಕೀ ಬಾನೀ
ಏಕ್ ನಾಮ್ ಮನ್ ಮಾಹಿ ಸಮಾನೀ
ದೂಖ್ ರೋಗ್ ಬಿನಸೇ ಭೈ ಭರಮ್
ಸಾಧ್ ನಾಮ್ ನಿರ್‌ಮಲ್ ತಾ ಕೇ ಕರಮ್
ಸಭ್ ತೇ ಊಚ್ ತಾಕೀ ಸೋಭಾ ಬನೀ
ನಾನಕ್ ಇಹ್ ಗುಣಿ ನಾಮ್ ಸುಖ್‌ಮನೀ ॥ 8 ॥

ವೈರತ್ವ ನಾಶವಾಗಿ ಪಾದ ಧೂಳಾಯಿತು
ಸಾಧು ಸಂಗದಿಂದ ನಾಮಾಮೃತ ಲಭಿಸಿತು
ಸುಪ್ರಸನ್ನರಾದರು ಪರಮ ಗುರುವರ್ಯರು
ಸೇವಕನ ಪೂರ್ಣ ಶರಣಾಗತಿ ಒಪ್ಪಿದರು
ಪ್ರಾಪಂಚಿಕ ವ್ಯವಹಾರದಿಂದ ಮುಕ್ತಿ ಲಭಿಸಿತು
ರಾಮ ನಾಮವನ್ನು ಕೇಳಿ ನಾಲಗೆ ನುಡಿಯಲೆದ್ದಿತು
ಪ್ರಭು ಅತ್ಯಂತ ಪ್ರೇಮದಿಂದ ದಯೆ ತೋರಿದನು
ಹೇ ನಾನಕ ! ನಮ್ಮ ಸೇವೆ ಸಾರ್ಥಕತೆ ನಮಗೆ ನೀಡಿದನು ॥ 4 ॥

24/5

ಹೇ ಸಂತ ಮಿತ್ರರೆ ! ಉಪಮಾನಕ್ಕೆ ಪ್ರಭುವನಿಟ್ಟುಕೊಳ್ಳಿ
ಸಾವಧಾನದಿಂದಲೆ ಏಕಾಗ್ರತೆಯ ಚಿತ್ತದಲ್ಲಿ
ಸುಖಮಣಿ ಸಹಜದಲಿ ಗೋವಿಂದ ನಾಮದ ಗುಣ ತಾನೆ
ಮನದಲಿ ನೆಲೆಸಿರುವುದು ಗುಣದ ಖಜಾನೆ
ಅವನಿಚ್ಛೆಗಳನೆಲ್ಲ ಪೂರ್ಣವಾಗಿಸುವನು
ಆ ಮಹಾಪುರುಷ ಲೋಕದೊಳೆಲ್ಲ ಪ್ರಕಟವಾಗುವನು
ಎಲ್ಲರಿಗಿಂತ ಉತ್ತಮ ಪದವಿಗೆ ಅವನೇರುವನು
ಅವನು ಪುನರ್ಜನ್ಮವಿಲ್ಲದಂತಾಗುವನು
ಆ ಸೇವಕನು ಹರಿನಾಮ ಧನ ಹೊಂದಿ ಹೊರಟಹನು
ನಾನಕನು ಅವನನ್ನೆ ಅದೃಷ್ಟವಂತನೆನ್ನುವನು ॥ 5 ॥

24/6

ಕ್ಷೇಮ ಶಾಂತಿ ವೃದ್ಧಿ ಎಲ್ಲವೂ ನವನಿಧಿಗಳು
ಬುದ್ಧಿ ಜ್ಞಾನ ಮತ್ತೆಲ್ಲಾ ಸರ್ವ ಸಿದ್ಧಿಗಳು
ವಿದ್ಯೆ ತಪ ಯೋಗ ಪ್ರಭುವಿನ ಧ್ಯಾನಾದಿಗಳು
ಶ್ರೇಷ್ಠವಾದ ಜ್ಞಾನ ಮತ್ತು ಉತ್ತಮ ಸ್ನಾನಾದಿಗಳು

ಮಿಟಿ ಗಏ ಬೈರ್ ಭಏ ಸಭ್ ರೇನ್
ಅಂಮ್ರಿತ್ ನಾಮ್ ಸಾಧ್ ಸಂಗಿ ಲೈನ್
ಸುಪ್ರಸಂನ್ ಭಏ ಗುರುದೇವ್
ಪೂರನ್ ಹೋಈ ಸೇವಕ್ ಕೀ ಸೇವಾ
ಆಲ್ ಜಂಜಾಲ್ ಬಿಕಾರ್ ತೇ ರಹ್‌ತೇ
ರಾಮ್ ನಾಮ್ ಸುನಿ ರಸನಾ ಕಹ್‌ತೆ
ಕರಿ ಪ್ರಸಾದ್ ದಯಾ ಪ್ರಭಿ ಧಾರೀ
ನಾನಕ್ ನಿಬಹೀ ಖೇಪ್ ಹಮಾರೀ ॥ 4 ॥

24/5

ಪ್ರಭ್ ಕೀ ಉಸ್‌ತತಿ ಕರಹು ಸಂತ್‌ಮೀತ್
ಸಾವ್‌ಧಾನ್ ಏಕಾಗರ್ ಚೀತ್
ಸುಖ್‌ಮನೀ ಸಹಜ್ ಗೋಬಿಂದ್ ಗುನ್ ನಾಮ್
ಜಿಸ್ ಮನಿ ಬಸೈ ಸು ಹೋತ್ ನಿಧಾನ್
ಸರಬ್ ಇಛಾ ತಾ ಕೀ ಪೂರನ್ ಹೋಇ
ಪ್ರಧಾನ್ ಪುರುಖ್ ಪ್ರಗಟ್ ಸಭ್ ಲೋಇ
ಸಭ್ ತೇ ಊಚ್ ಪಾಏ ಅಸ್‌ಥಾನ್
ಬಹುರಿ ನ ಹೋವೈ ಆವನ್ ಜಾನ್
ಹರಿ ಧನ್ ಖಾಟಿ ಚಲೈ ಜನ್ ಸೋಇ
ನಾನಕ್ ಜಿಸ್‌ಹಿ ಪರಾಪತಿ ಹೋಇ ॥ 5 ॥

24/6

ಖೇಮ್ ಸಾಂತಿ ರಿಧಿ ನವ್ ನಿಧಿ
ಬುಧಿ ಗಿಆನ್ ಸರಬ್ ತಹ್ ಸಿಧಿ
ಬಿದಿಆ ತಪ್ ಜೋಗ್ ಪ್ರಭ್ ಧ್ಯಾನ್
ಜ್ಞಾನ್ ಸ್ರೇಸಟ್ ಊತಮ್ ಇಸನಾನ್

24/2

ಇರಲು ಕ್ಷೇಮ ಆರೋಗ್ಯ ಶಾಂತಿ ಆನಂದದಲ್ಲಿ
ಭಜಿಸು ಸಾಧು ಸಂಗದಲ್ಲಿ ಪರಮಾನಂದದಲ್ಲಿ
ನರಕನು ದೂರವಿಟ್ಟು ಆತ್ಮೋದ್ಧಾರ ಮಾಡಿ
ಗುಣ ಗೋವಿಂದನ ಅಮೃತ ರಸ ಪಾನಮಾಡಿ
ನೆನೆಸು ಮನದಲಿ ಒಬ್ಬ ನಾರಾಯಣನನು
ಏಕ ಸ್ವರೂಪದ ಅನೇಕ ಮುಖದವನನು
ಗೋಪಾಲ ದಾಮೋದರ ದೀನದಯಾಳು ಅವನು
ದುಃಖಭಂಜನನು, ಪೂರ್ಣ ಕೃಪಾನಿಧಾನನು
ಮತ್ತೆ ಮತ್ತೆ ಸ್ಮರಿಸು ಅವನ ನಾಮವನು
ನಾನಕನೆ ಆತ್ಮಕೆಲ್ಲ ಆಶ್ರಯದಾತನವನು ॥ 2 ॥

24/3

ಸಾಧು ಸಂತರ ವಚನ ಅತಿ ಪವಿತ್ರ ಶ್ಲೋಕಗಳು
ಅಮೂಲ್ಯ ಹರಿನಾಮ ರತ್ನದೊಡವೆಗಳು
ಕೇಳುವರು ಗಳಿಸುವರು ಉದ್ಧಾರವಾಗುವರು
ಸ್ವಯಂ ಈಜಿ ಈಜಿಸಿದ ಜನ ಮುಕ್ತರಾಗುವರು
ಸಫಲವಾತನ ಜೀವನ ಆತನ ಸಾಧು ಸಂಗ
ಪ್ರೇಮದಿಂದ ಒದಗಿಬಂದ ಹರಿ ನಾಮ ರಂಗ
ಜೈ ಜೈ ಘೋಷದೊಡನೆ ಆಗುತಿದೆ ಅನಹದ ನಾದ
ಕೇಳಿ ಕೇಳಿ ಆನಂದದಿಂದ ಪ್ರಭು ಪ್ರಕಟವಾದ
ಮಹಾತ್ಮರ ಹಣೆಯ ಮೇಲೆ ಪ್ರಭು ಪ್ರಕಟಿಸುವನು
ನಾನಕನು ಅವನೊಡನೆ ಜೀವನ್ಮುಕ್ತನಾಗುವನು ॥ 3 ॥

24/4

ಶರಣ ಯೋಗ್ಯರೆಂದು ಕೇಳಿ ಪ್ರಭು ಶರಣರಾಗಿ ಬಂದೆವು
ಪ್ರಭುವಿನ ಕೃಪೆಯಿಂದ ಅವನಲೇ ಲಯವಾದೆವು

24/2

ಖೇಮ್ ಕುಸಲ್ ಸಹಜ್ ಆನಂದ್
ಸಾಧ್ ಸಂಗಿ ಭಜ್ ಪರಮಾನಂದ್
ನರಕ್ ನಿವಾರಿ ಉಧಾರ್‌ಹ್ ಜೀಉ
ಗುನ್ ಗೋವಿಂದ್ ಅಂಮ್ರಿತ್ ರಸ್ ಪೀಉ
ಚಿತಿ ಚಿತ್‌ವೆಹ್ ನಾರಾಯಣ್ ಏಕ್
ಏಕ್ ರೂಪ್ ಜಾಕೇ ರಂಗ್ ಅನೇಕ್
ಗೋಪಾಲ್ ದಾಮೋದರ್ ದೀನ್ ದಯಾಲ್
ದುಖ ಭಂಜನ್ ಪೂರನ್ ಕಿರ್‌ಪಾಲ್
ಸಿಮರಿ ಸಿಮರಿ ನಾಮ್ ಬಾರಂಬಾರ್
ನಾನಕ್ ಜೀಅ ಕಾ ಇಹೈ ಆಧಾರ್ ॥ 2 ॥

24/3

ಊತಮ್ ಸಲೋಕ್ ಸಾಧ್ ಕೇ ಬಚನ್
ಅಮುಲೀಕ್ ಲಾಲ್ ಏಹಿ ರತನ್
ಸುನತ್ ಕಮಾವತ್ ಹೋತ್ ಉಧಾರ್
ಆಪಿ ತರೈ ಲೋಕಹು ನಿಸ್‌ತಾರ್
ಸಫಲ್ ಜೀವನ್ ಸಫಲ್‌ತಾಕಾ ಸಂಗ್
ಜಾ ಕೈ ಮನಿ ಲಾಗಾ ಹರಿ ರಂಗ್
ಜೈ ಜೈ ಸಬದ್ ಅನಾಹದ್ ಬಾಜೈ
ಸುನಿ ಸುನಿ ಅನದ್ ಕರೇ ಪ್ರಭು ಗಾಜೈ
ಪ್ರಗಟೇ ಗುಪಾಲ್ ಮಹಾಂತ್ ಕೈ ಮಾಥೆ
ನಾನಕ್ ಉಧರೇ ತಿನ್ ಕೈ ಸಾಥೆ ॥ 3 ॥

24/4

ಸರನಿ ಜೋಗು ಸುನಿ ಸರನಿ ಆಏ
ಕರಿ ಕಿರ್‌ಪಾ ಪ್ರಭ್ ಆಪ್ ಮಿಲಾಏ

ಸ್ವಾಗತ ಸ್ವಾಗತ ಸುಸ್ವಾಗತ ಬರುವ ಮಹಾಮಹಿಮನಿಗೆ
ಕೃಪೆಯಿಂದ ಜಗವ ತೇಲಿಸಿ ಬಿಡುವನಿಗೆ
ಭಕ್ತ ಜನ ಬರುತಿರಲು ಅದೇ ರುಚಿ•ರವಾದುದು
ಭಕ್ತರೊಡನೆ ಪ್ರಭುನಾಮ ಮನದಲ್ಲಿ ನೆಲೆಸುವುದು
ಸ್ವಯಂ ಮುಕ್ತನು ಸಂಸಾರ ಮುಕ್ತಿಗೊಳಿಸುವನು
ನಾನಕನೆ ಆ ಭಕ್ತನಿಗೆ ಮಾಡುವೆ ನಮಸ್ಕಾರವನು ॥ 8 ॥

ಶ್ಲೋಕ :

ಪೂಜಿಸಿದನು ನಾ ಪ್ರಭು ಪೂರ್ಣನನು
ಪೂರ್ಣ ನಾಮದವನನ್ನು
ನಾನಕ ಪಡೆದ ಪೂರ್ಣನನು
ಮಾಡಿ ಅವನ ಗುಣಗಾನವನು

ಅಷ್ಟಪದಿ 24

ಕೇಳು ಪೂರ್ಣ ಗುರು ಉಪದೇಶವನು
ಹತ್ತಿರದಿಂದ ನೋಡು ಪರಬ್ರಹ್ಮನನು
ಉಸಿರುಸಿರಿಗೂ ಸ್ಮರಿಸು ಗೋವಿಂದ ನಾಮವನು
ದೂರಾಗಿಸು ಮನದೊಳಿಳಿದ ಚಿಂತೆಯನು
ಬಿಡು ಬಿಡು ಅನಿತ್ಯದ ಅಲೆ ಅಲೆ ಆಸೆಯನು
ವಿನಂತಿಸಿಕೋ ತ್ಯಾಗ ಮಾಡಿ ನೀನು ನಿನ್ನನ್ನು
ಎಲೆ ಮನವೆ ಬೇಡು ಸಂತರ ಪಾದ ಧೂಳನ್ನು
ಅಗ್ನಿ ಸಾಗರದಿಂದ ಪಾರಾಗಲು ಮಾಡು ಸಂತ ಸಂಗವನು
ತುಂಬಿಸಿಕೋ ಹರಿನಾಮದಿಂದ ನಿನ್ನ ಭಂಡಾರವನು
ನಾನಕ ಮಾಡುವನು ಗುರು ಪೂರ್ಣನಿಗೆ ನಮಸ್ಕಾರವನು ॥ 1 ॥

 

ಧಂನ್ ಧಂನ್ ಧಂನ್ ಜನ್ ಆಇಆ
ಜಿಸ್ ಪ್ರಸಾದಿ ಸಭ್ ಜಗತ್ ತರಾಇಆ
ಜನ್ ಆವನ್ ಕಾ ಇಹೈ ಸುಆಉ
ಉನ್ ಕೈ ಸಂಗಿ ಚಿತಿ ಆವೈ ನಾಉ
ಆಪಿ ಮುಕತ್ ಮುಕತ್ ಕರೈ ಸಂಸಾರ್
ನಾನಕ್ ತಿಸು ಜನ್ ಕಉ ಸದಾ ನಮಸ್‌ಕಾರ್ 8 ॥

ಸಲೋಕು :

ಪೂರಾ ಪ್ರಭು ಆರಾಧಿ ಆ
ಪೂರಾ ಜಾಕಾ ನಾಉ
ನಾನಕ್ ಪೂರಾ ಪಾಇಆ
ಪೂರೇ ಕೇ ಗುನ್ ಗಾಉ

ಅಸಟ್‌ಪದಿ—24

ಪೂರೇ ಗುರ್ ಕಾ ಸುನಿ ಉಪದೇಸ್
ಪಾರ್‌ಬ್ರಹಮ್ ನಿಕಟಿ ಕರಿ ಪೇಖು
ಸಾಸಿ ಸಾಸಿ ಸಿಮರಹು ಗೋಬಿಂದ್
ಮನ್ ಅಂತರ್ ಕೀ ಉತರೈ ಚಿಂದ್
ಆಸ್ ಅನಿತ್ ತಿಆಗ್‌ಹು ತರಂಗ್
ಸಂತ್ ಜನಾ ಕೀ ಧೂರೀ ಮನ್ ಮಂಗ್
ಆಪ್ಪ್ ಛೋಡಿ ಬೇನತೀ ಕರಹು
ಸಾಧ್ ಸಂಗಿ ಅಗನಿ ಸಾಗರ್ ತರಹು
ಹರಿ ಧನ್ ಕೇ ಭರಿ ಲೇಹ್ ಭಂಡಾರ್
ನಾನಕ್ ಗುರ್ ಪೂರೇ ನಮಸ್‌ಕಾರ್ ॥ 1 ॥

23/6

ಪಂಚ ಭೂತಗಳಲ್ಲು ಅವನು ವ್ಯಾಪಕನಾಗಿರುವನು
ಎಲ್ಲರ ನೇತ್ರದಿಂದ ಸ್ವಯಂ ನೋಟಕನಾಗಿರುವನು
ಅಂಡ ಪಿಂಡ ಬ್ರಹ್ಮಾಂಡವೆಲ್ಲ ಯಾರ ಶರೀರವೋ
ಆತನೇ ತನ್ನ ಗುಣಗಾನಗಳನು ಕೇಳುವನು
ಜನನ ಮರಣವನವನು ಒಂದು ಆಟವಾಗಿಸಿಹನು
ಮಾಯೆಯನು ತನ್ನಾಜ್ಞೆಗೆ ಒಳಪಡಿಸಿಹನು
ಎಲ್ಲದರೊಳಿದ್ದರೂ ಸಹ ಒತ್ತಟ್ಟಿಗಿರುವನು
ಏನಾದರೂ ಹೇಳಲಿದ್ದರೆ ತಾನೇ ಹೇಳುವನು
ಜೀವ ಅವನಾಜ್ಞೆಯಂತೆ ಬಂದು ಹೋಗುವುದು
ನಾನಕನೆ ಅವನಿಗಿಷ್ಟವಾದಲ್ಲಿ ಅವನಲ್ಲೇ ಸೇರುವುದು ॥ 6 ॥

23/7

ಅವನಿಂದ ಯಾವುದಾದರೂ ಅದು ಕೆಟ್ಟದಾಗದು
ಆಗುವುದೆಲ್ಲಾ ದೇವನಲ್ಲದೆ ಹೇಳು ಮತ್ತಾರದು ?
ಸ್ವಯಂ ಯೋಗ್ಯ ಅತಿ ಯೋಗ್ಯ ಅವನ ಕೃತಿಗಳು
ಸ್ವಯಂ ತಿಳಿದಿಹುದು ಅವನ ಮನದ ಸತ್ಯಗಳು
ಸ್ವಯಂ ಸತ್ಯನು, ಅವನ ರಚನೆ ಶತ ಸತ್ಯವು
ಹಾಸುಹೊಕ್ಕಾಗಿ ಸೇರಿ ಒಡನಿಹುದು ನಿತ್ಯವು
ಅವನ ಗತಿಮಿತಿ ಯಾರೂ ಹೇಳಲಸಾಧ್ಯ ?
ಅವನಂತೆ ಮತ್ತೊಬ್ಬನಿದ್ದಲ್ಲಿ ಸಾಧ್ಯ
ಅವನ ಪರಿಕ್ರಮಗಳೆಲ್ಲ ಮಹಿಮಾನ್ವಿತವಾದುದು
ನಾನಕನೆ ಇದನೆಲ್ಲ ಗುರು ಪ್ರಸಾದವೆಂದರಿವು ದು ॥ 7

23/8

ಅವನನ್ನು ತಿಳಿದವನು ಸುಖ ಶಾಂತಿಯಲಿರುವನು
ತನ್ನೊಡನೆ ದೇವನು ಅವನನಿರಿಸಿಕೊಳ್ಳುವನು
ಧನವಂತ ಕುಲವಂತ ಸಾಮಂತನವನು
ಭಗವಂತನ ಮನದಲಿ ಮುಕ್ತಿ ಹೊಂದುವನು

23/6

ಸರಬ್ ಭೂತ್ ಆಪಿ ವರ್‌ತಾರಾ
ಸರಬ್ ನೈನ್ ಆಪಿ ಪೇಖನ್‌ಹಾರಾ
ಸಗಲ್ ಸಮಗ್ರೀ ಜಾ ಕಾ ತನಾ
ಆಪನ್ ಜಸ್ ಆಪ್ ಹೀ ಸುನಾ
ಆವನ್ ಜಾನ್ ಇಕ್ ಖೇಲ್ ಬನಾಇಆ
ಆಗಿ ಆಕಾರೀ ಕೀನೀ ಮಾಯಾ
ಸಬ್ ಕೈ ಮಧಿ ಅಲಿಪತೋ ರಹೈ
ಜೋ ಕಿಛು ಕಹ್‌ಣಾ ಸು ಆಪೇ ಕಹೈ
ಆಗಿಆ ಆವೈ ಆಗಿಆ ಜಾಇ
ನಾನಕ್ ಜಾ ಭಾವೈ ತಾ ಲಏ ಸಮಾಇ ॥ 6 ॥

23/7

ಇಸ್ ತೇ ಹೋಇ ಸು ನಾಹೀ ಬುರಾ
ಓರೈ ಕಹಹು ಕಿನೈ ಕಛು ಕರಾ
ಆಪಿ ಭಲಾ ಕರ್‌ತೂತಿ ಅತಿ ನೀಕೀ
ಆಪೇ ಜಾನೈ ಅಪನೇ ಜೀ ಕೀ
ಆಪಿ ಸಾಚ್ ಧಾರೀ ಸಭ್ ಸಾಚ್
ಓತಿ ಪೋತಿ ಆಪನ್ ಸಂಗಿ ರಾಚ್
ತಾಕೀ ಗತಿ ಮಿತಿ ಕಹೀ ನ ಜಾಇ
ದೂಸರ್ ಹೋಇ ತ ಸೋಝಿ ಪಾಇ
ತಿಸ್ ಕಾ ಕಿಆ ಸಭು ಪರ್‌ವಾನ್
ಗುರ್ ಪ್ರಸಾದಿ ನಾನಕ್ ಇಹು ಜಾನ್ ॥ 7 ॥

23/8

ಜೋ ಜಾನೈ ತಿಸು ಸದಾ ಸುಖು ಹೋಇ
ಆಪಿ ಮಿಲಾಇ ಲಏ ಪ್ರಭು ಸೋಇ
ಓಹು ಧನ್‌ವಂತ್ ಕುಲವಂತ್ ಪತಿವಂತ್
ಜೀವನ್ ಮುಕ್‌ತಿ ಜಿಸ್ ರಿದೈ ಭಗ್‌ವಂತ್

ಎಲ್ಲರ ಜ್ಯೋತಿಯೊಡನೆ ಅವನ ಜ್ಯೋತಿ ಇರುವುದು
ಹಾಸುಹೊಕ್ಕಾಗಿ ಸ್ವಾಮಿ ಅವನೇ ದುಡಿಯುತ್ತಿರುವುದು
ಗುರುವಿನ ಪ್ರಸಾದದಿಂದ ಭ್ರಮೆಯು ನಾಶವಾಗುವುದು
ನಾನಕನೆ ! ಅವನದೇ ಕೊನೆಯ ವಿಶ್ವಾಸವಿದು ॥ 3 ॥

23/4

ಸಂತ ಜನರು ನೋಡುವರು ಸರ್ವವ್ಯಾಪಿ ಬ್ರಹ್ಮನನು
ಸಂತ ಹೃದಯದಲ್ಲಿರುವ ಸಕಲ ಸದ್ಧರ್ಮವನು
ಸಂತ ಜನರು ಶುಭ ಜನಿತ ವಚನಗಳ ಕೇಳುವರು
ಸರ್ವವ್ಯಾಪಿ ರಾಮನೊಡನೆ ಅವರು ಸದಾ ಇರುವರು
ಅವನನ್ನು ತಿಳಿದವರು ಇದೇ ಹಾದಿ ಹಿಡಿಯುವರು
ಸಾಧು ಸಂತರೆಲ್ಲರು ಸತ್ಯ ವಚನ ನುಡಿಯುವರು
ಆದುದೆಲ್ಲವನು ಅವರು ಸುಖವೆಂದು ತಿಳಿಯುವರು
ಮಾಡಿ ಮಾಡಿಸುವ ಪ್ರಭು ತಿಳಿದವನೆನ್ನುವರು
ಒಳಗೂ ಅವನೇ ಹೊರಗೂ ಅವನೇ ವಾಸವಾಗಿರುವವನು
ನಾನಕನೆ ! ದರ್ಶನವಿತ್ತು ಸರ್ವ ವಿಶ್ವದ ಮನಮೋಹಕನು ॥ 4 ॥

23/5

ಸ್ವಯಂ ಪ್ರಭುವು ಸತ್ಯ ಅವನ ಸೃಷ್ಟಿ ಸತ್ಯವು
ಆ ಪ್ರಭುವಿನಿಂದಲೇ ಸಕಲ ಉತ್ಪತ್ತಿಯು
ಅವನಿಚ್ಛೆ ಇದ್ದಲ್ಲಿ ವಿಸ್ತರಿಸುವನವನು
ಅವನಿಚ್ಛೆ ಇರುವಂತೆ ಅದಕೆ ರೂಪ ಕೊಡುವನು
ಅವನು ಕಲಾಕೃತಿಗಳಲ್ಲಿ ಬರಹಕೂ ದೊರಕನು
ಅವನಿಚ್ಛೆ ಇರುವನನು ಜೊತೆ ಇರಿಸಿಕೊಳ್ಳುವನು
ಯಾರು ನಿಕಟ ಯಾರು ದೂರ ಹೇಳಲಾಗದವನಿಗೆಂದು
ಎಲ್ಲರಲ್ಲೂ ತಾನೆ ತಾನು ಇರುತಿರಲು ಎಂದೆಂದು
ಯಾರ ಹೃದಯದಲ್ಲಿ ಸ್ವಾಮಿ ನೀಡುವನೋ ದರ್ಶನ
ನಾನಕನೆ ! ಅವನಿಗಿಹುದು ಪ್ರಭುವಿನಾಕರ್ಶನ ॥ 5 ॥

ಸರಬ್ ಜೋತಿ ಮಹಿ ಜಾಕೀ ಜೋತಿ
ಧಾರಿ ರಹಿಓ ಸುಆಮೀ ಓತಿ ಪೋತಿ
ಗುರು ಪರ್‌ಸಾದಿ ಭರಮ್ ಕಾ ನಾಸ್
ನಾನಕ್ ತಿನ್ ಮಹಿ ಏಹು ಬಿಸಾಸ್ ॥ 3 ॥

23/4

ಸಂತ್ ಜನಾ ಕಾ ಪೇಖನ್ ಸಭ್ ಬ್ರಹಮ್
ಸಂತ್ ಜನಾ ಕೈ ಹಿರ್‌ದೈ ಸಭಿ ಧರಮ್
ಸಂತ್ ಜನಾ ಸುನ್‌ಹಿ ಸಭು ಬಚನ್
ಸರಬ್ ಬಿ ಆಪೀ ರಾಮ್ ಸಂಗಿ ರಚನ್
ಜಿನಿ ಜಾತಾ ತಿಸ್ ಕೀ ಇಹ್ ರಹತ್
ಸತಿ ಬಚನ್ ಸಾಧೂ ಸಭೀ ಕಹತ್
ಜೋ ಜೋ ಹೋಇ ಸೋಈ ಸುಖ್ ಮಾನೈ
ಕರನ್ ಕರಾವನ್‌ಹಾರು ಪ್ರಭು ಜಾನೈ
ಅಂತರಿ ಬಸೇ ಬಾಹರಿ ಭೀ ಓಹೀ
ನಾನಕ್ ದರ್‌ಸನ್ ದೇಖಿ ಸಭ್ ಮೋಹೀ ॥ 4 ॥

23/5

ಆಪಿ ಸತಿ ಕೀಆ ಸಭು ಸತಿ
ತಿಸು ಪ್ರಭ್ ತೇ ಸಗಲೀ ಉತ್‌ಪತಿ
ತಿಸು ಭಾವೈ ತಾ ಕರೇ ಬಿಸ್‌ಥಾರ್
ತಿಸು ಭಾವೈ ತಾ ಏಕಂಕಾರ್
ಅನಿಕ್ ಕಲಾ ಲಖೀ ನಹ್ ಜಾಇ
ಜಿಸ್ ಭಾವೈ ತಿಸ್ ಲಏ ಮಿಲಾಇ
ಕವನ್ ನಿಕಟಿ ಕವನ್ ಕಹೀಐ ದೂರಿ
ಆಪೇ ಆಪಿ ಆಪ್ ಭರ್ ಪೂರಿ
ಅಂತರ್‌ಗತಿ ಜಿಸು ಆಪಿ ಜನಾಏ
ನಾನಕ್ ತಿಸು ಜನ್ ಆಪಿ ಬುಝಾಏ ॥ 5 ॥

ಅವನ ಸಾಮಗ್ರಿಗಳಿಲ್ಲಾ ಒಂದು ಸ್ವರೂಪದಲ್ಲಿಹುದು
ಅನೇಕ ಪ್ರಕಾರದ ಬಣ್ಣಗಳಲಿ ಕಂಡುಬರುವುದು
ಪ್ರಭುವಿನ ನಾಮಾಮೃತ ನವನಿಧಿಯಾಗಿದೆ
ಇದು ನಮ್ಮ ಶರೀರದಲ್ಲೇ ಆವಾಸವಾಗಿದೆ
ಶೂನ್ಯ ಸಮಾಧಿಯಲ್ಲಿ ಒಂದು ನಾದರಸವಾಗಿದೆ
ಆನಂದಾನುಭವದಾಶ್ಚರ್ಯ ಹೇಳದಾಗಿದೆ
ಅವನನ್ನು ಕಂಡವನಿಗೆ ಅವನೇ ತೋರಿಸುವನು
ನಾನಕನೆ ! ಆ ಸೇವಕನಿಗೆ ಆತನೇ ಜ್ಞಾನ ನೀಡುವನು ॥ 1 ॥

23/2

ಒಳಗೂ ಹೊರಗೂ ಆತನನಂತ
ಪ್ರತ್ಯೇಕ ಶರೀರಗಳಲ್ಲಿ ವ್ಯಾಪಕ ಭಗವಂತ
ಭೂ ಗಗನ ಪಾತಾಳದಲ್ಲಿ ನೆಲೆಸಿಹನು
ಎಲ್ಲರ ಪರಿಪಾಲಕ ಪರಿಪೂರ್ಣನವನು
ಕಾಡು ಮೇಡು ಪರ್ವತಗಳ ಪ್ರಭು ಅವನು
ಆಜ್ಞೆ ಎಂತಿದೆ ಅಂತೆ ಕರ್ಮಕಾರಕನು
ಅವನು ವಾಯು ಜಲ ಅಗ್ನಿಯಲ್ಲಿಹನು
ನಾಲ್ಕು ದಿಕ್ಕು ಹತ್ತು ದಿಶೆಗಳಲೂ ಅವನಿಹನು
ಅವನಿಂದ ಹೊರತಾದ ಸ್ಥಾನ ಇಲ್ಲವೆಲ್ಲೂ
ಹೇ ನಾನಕ ! ಗುರು ಕೃಪೆಯಿಂದಿದೆ ಸುಖವೆಲ್ಲೆಲ್ಲೂ ॥ 2 ॥

23/3

ವೇದ ಪುರಾಣ ಸ್ಮೃತಿಗಳಲಿ ನೋಡಲೊಮ್ಮೆ ಕಾಣುವನು
ಚಂದ್ರ ಸೂರ್ಯ ನಕ್ಷತ್ರಗಳಲಿ ದೇವನೊಬ್ಬನು
ದೇವವಾಣಿ ಎಲ್ಲರಲೂ ಭಿನ್ನವಾಗಿ ನುಡಿವನು
ತಾನೇ ಆಡದವನು ಎಂದೂ ಆಡನು
ಸರ್ವಕಲಾಪೂರ್ಣನವನು, ಆಟವಾಡುತಿರುವನು
ಕಟ್ಟಲಾಗದದರ ಬೆಲೆ ಅದರಮೂಲ್ಯ ಗುಣವನು

ಸಗಲ್ ಸಮಗ್ರೀ ಏಕ್‌ಸು ಘಟ್‌ಮಾಹಿ
ಅನಿಕ್ ರಂಗ್ ನಾನಾ ದ್ರಿಸ್‌ಟಾಹಿ
ನವು ನಿಧಿ ಅಂಮ್ರಿತ್ ಪ್ರಭ್‌ಕಾ ನಾಮ್
ದೇಹೀ ಮಹಿ ಇಸ್‌ಕಾ ಬಿಸ್ರಾಮು
ಸುಂನ್ ಸಮಾಧಿ ಅನ್‌ಹತ್ ತಹ್ ನಾದ್
ಕಹನ್ ನಾ ಜಾಈ ಅಚರಜ್ ಬಿಸ್‌ಮಾದ್
ತಿನಿ ದೇಖಿಆ ಜಿಸು ಆಪಿ ದಿಖಾಏ
ನಾನಕ್ ತಿಸು ಜನ್ ಸೋಝೀ ಪಾಏ ॥ 1 ॥

23/2

ಸೋ ಅಂತರಿ ಸೋ ಬಾಹರಿ ಅನಂತ್
ಘಟಿ ಘಟಿ ಬಿಆಪಿ ರಹಿಆ ಭಗವಂತ್
ಧರ್‌ನಿ ಮಾಹಿ ಆಕಾಸ್ ಪಇಆಲ್
ಸರಬ್ ಲೋಕ್ ಪೂರನ್ ಪ್ರತಿಪಾಲ್
ಬನಿ ತಿನಿ ಪರ್‌ಬತಿ ಹೈ ಪಾರ್‌ಬ್ರಹಮ್
ಜೈಸೀ ಆಜ್ಞಾ ತೈಸಾ ಕರಮ್
ಪವ್ರಣ್ ಪಾಣೀ ಬೈಸಂತರ್ ಮಾಹಿ
ಚಾರಿ ಕುಂಟ್ ದಹ್‌ದಿಸೇ ಸಮಾಹಿ
ತಿಸ್ ತೇ ಭಿಂನ್ ನಹೀ ಕೋ ಠಾಉ
ಗುರ್ ಪ್ರಸಾದಿ ನಾನಕ್ ಸುಖ್ ಪಾಉ ॥ 2 ॥

23/3

ಬೇದ್ ಪುರಾನ್ ಸಿಂಮ್ರಿತಿ ಮಹಿ ದೇಖ್
ಸಸೀಅರ್ ಸೂರ್ ನಖ್ಯತ್ರ್ ಮಹಿ ಏಕ್
ಬಾಣೀ ಪ್ರಭ್ ಕೀ ಸಭ್ ಕೋ ಬೋಲೈ
ಆಪಿ ಅಡೋಲು ನ ಕಬ್‌ಹೂ ಡೋಲೈ
ಸರಬ್ ಕಲಾ ಕರಿ ಖೇಲೈ ಖೇಲ್
ಮೋಲಿ ನ ಪಾಇಐ ಗುಣಹ್ ಅಮೋಲ್

ಚಿಂತೆ ನಿಶ್ಚಿಂತೆಯಾಗಿ ಅಹಂಕಾರ ನಾಶವಾಗುವುದು
ಆ ದೇವದಾಸನವರಿಗೆ ಯಾರೂ ಸೇರಲಾಗದು
ಆತನ ಶಿರದ ಮೇಲೆ ಶೂರ ವೀರ ಗುರು ನಿಂದಿಹನು
ನಾನಕನೆ ! ಆತನ ಕಾರ್ಯ ಗಳಿಸುವುದು ಸಕಲ ಸಿದ್ಧಿಯನು ॥ 7 ॥

22/8

ಆತನದು ಜ್ಞಾನಪೂರ್ಣ ಅಮೃತಮಯ ದೃಷ್ಟಿ
ದರ್ಶನ ಮಾತ್ರದಿಂದುದ್ಧರಿಸುವುದು ವಿಶ್ವ ಸೃಷ್ಟಿ
ಆತನ ಚರಣಕಮಲದ ಅನುಪಮತೆ
ಸಫಲವಾದ ಸುಂದರ ಹರಿರೂಪ ದರ್ಶನತೆ
ಅಂಥವನ ಸೇವೆ ಸಲ್ಲಿಸುವನು ಧನ್ಯನು
ಅವನು ಅಂತರ್ಯಾಮಿ, ಪುರುಷ ಪ್ರಧಾನನು
ಅವನಾರ ಹೃದಯವಾಸಿಯೋ ಅವನು ಮುಕ್ತನು
ಅವನಲ್ಲಿಗೆ ಯಮನೂ ಬರಲಾರನು
ಅವನು ಅಮರನಾಗಿ ಪದವೀಧರನಾಗುವನು
ಸಾಧು ಸಂಗದಲ್ಲಿ ನಾನಕನೆ ! ಅವನು ಹರಿ ಸ್ಮರಿಸಿಹನು ॥॥ 8 ॥

ಶ್ಲೋಕ :

ಗುರು ಜ್ಞಾನಾಂಜನ ನೀಡಿದನು
ಅಜ್ಞಾನಾಂಧಕಾರ ನಾಶವಾಯಿತು
ಹರಿ ಕೃಪೆಯಿಂದ ಸಂತರು ಸಿಗುವರು
ನಾನಕನೆ ! ಮನ ಬೆಳಗುವರವರು

ಅಷ್ಟಪದಿ—23

ಸಂತರೊಡನೆ ಪ್ರಭುವನ್ನು ಎನ್ನಂತರದಲಿ ಕಂಡಿಹೆ ನಾ
ಪ್ರಭು ನಾಮದಲಿ ರುಚಿ ಅನುಭವಿಸಿಹೆ ನಾ

ಚಿಂತಾ ಜಾಇ ಮಿಟೈ ಅಹಂಕಾರ್
ತಿಸು ಜನ್ ಕಉ ಕೋಇ ನ ಪಹುಚನಹಾರ್
ಸಿರ್ ಊಪರಿ ಠಾಢಾ ಗುರು ಸೂರಾ
ನಾನಕ್ ತಾ ಕೇ ಕಾರಜ್ ಪೂರಾ ॥ 7 ॥

22/8

ಮತಿ ಪೂರೀ ಅಂಮ್ರಿತು ಜಾಕೀ ದ್ರಿಸ್‌ಟಿ
ದರಸನ್ ಪೇಖತ್ ಉಧರತ್ ಸ್ರಿಸ್‌ಟಿ
ಚರನ್ ಕಮಲ್ ಜಾಕೇ ಅನೂಪ್
ಸಫಲ್ ದರ್‌ಸನ್ ಸುಂದರ್ ಹರಿ ರೂಪ್
ಧನ್ ಸೇವಾ ಸೇವಕ್ ಪರ್‌ವಾನ್
ಅಂತರ್‌ಜಾಮೀ ಪುರಖ್ ಪ್ರಧಾನ್
ಜಿಸ್ ಮನಿ ಬಸೈ ಸು ಹೋತ್ ನಿಹಾಲ್
ತಾ ಕೈ ನಿಕಟಿ ನ ಆವತ್ ಕಾಲ್
ಅಮರ್ ಭಏ ಅಮರಾ ಪದು ಪಾಇಆ
ಸಾಧ್ ಸಂಗಿ ನಾನಕ್ ಹರಿ ಧಿಆಇಆ ॥ 8 ॥

ಸಲೋಕು :

ಜ್ಞಾನ್ ಅಂಜನ್ ಗುರಿ ದೀಆ
ಅಗ್ಯಾನ್ ಅಂಧೇರ್ ಬಿನಾಸ್
ಹರಿ ಕಿರ್‌ಪಾ ತೇ ಸಂತ್ ಭೇಟಿಆ
ನಾನಕ್ ಮನಿ ಪರಗಾಸ್

ಅಸಟ್‌ಪದಿ—23

ಸಂತ್ ಸಂಗಿ ಅಂತರಿ ಪ್ರಭು ಡೀಠಾ
ನಾಮ್ ಪ್ರಭೂಕಾ ಲಾಗಾ ಮೀಠಾ

ರಾಮನಾಮದ ತತ್ವ ವಿಚಾರ ಮಾಡು
ಈ ದುರ್ಲಭ ದೇಹವನ್ನು ದಡ ಸೇರಿಸಿಬಿಡು
ಅಮೃತ ವಚನಗಳಿಂದ ಹರಿ ಯಶ ಹಾಡು
ಈ ಪ್ರಾಣವನ್ನು ದೇವನೆಡೆ ತೇಲಿಸಿ ಬಿಡು
ಪ್ರಭುವಿನೊಡನೆ ಸೇರಿರು ಎಂಟು ಪ್ರಹರಗಳಲ್ಲು
ಸುಜ್ಞಾನ ದೊರಕಲು ಅಂಧಕಾರವಳಿಯಲು
ಉಪದೇಶಗಳನು ಕೇಳಿ ಹೃದಯದಲ್ಲಿರಿಸಿಕೋ
ನಾನಕನೆ ! ಮತ್ತೆ ನಿನ್ನ ಮನದಿಚ್ಛೆ ಈಡೇರಿಸಿಕೋ ॥ 5 ॥

22/6

ಲೋಕ ಪರಲೋಕವೆರಡರ ಸವಾರಿ ಮಾಡು
ರಾಮನಾಮ ಹೃದಯ ಮಧ್ಯದಲಿ ಧರಿಸಿಕೊಂಡು
ಗುರು ಶಿಕ್ಷೆಯಿಂದ ಪರಿಪೂರ್ಣನಾದವನ
ಮನದೊಳವನೇ ನೆಲಸಿರಲು ಸತ್ಯ ತಿಳಿದಿಹನು
ತನು ಮನದ ಸಂಗಮದಲಿ ನಾಮ ಜಪದಿಂದ
ದುಃಖ ಕ್ಲೇಶಗಳು ದೂರಾಗುವುವು ಮನದಿಂದ
ಆಗು ನೀ ವ್ಯಾಪಾರಿ ಸತ್ಯನಾಮದ ವ್ಯಾಪಾರಿ
ದೇವನಿರುವಲ್ಲಿ ನೀನಾಗು ನಿತ್ಯ ಸೂರಿ
ಒಬ್ಬನೇ ಹರಿಯನ್ನು ನೀ ಮನದಲ್ಲಿಡು
ನಾನಕನೆ ! ಮರುಜನ್ಮವಿರದಂತೆ ಎನಗೆ ನೀ ಮಾಡು ॥ 6 ॥

22/7

ಅವನಿಂದ ದೂರ ಹೋಗಬಹುದಾದರೂ ಎಲ್ಲಿ
ಸ್ಮರಿಸುವನನುದ್ಧರಿಸಿ ಅವನೇ ಕಾಪಾಡುತಿರುವಲ್ಲಿ
ಸ್ಮರಿಸು ನಿರ್ಭಯದಿಂದ ಭಯ ನಾಶವಾಗುವುದು
ಪ್ರಭು ಕೃಪೆಗೆ ಪ್ರಾಣಿ ಭವಬಂಧ ನಶಿಸುವುದು
ಪ್ರಭು ಇರಿಸಿಕೊಂಡವನಿಗೆ ದುಃಖವೇ ಇರದು
ನಾಮ ಜಪಿಸುವ ಮನ ಸುಖ ಅನುಭವಿಸದಿರದು

ರಾವನ್ ನಾಮ್ ತತ್ ಕರಹು ಬಿಚಾರ್
ದುರ್ಲಭ್ ದೇಹ್ ಕಾ ಕರಹು ಉಧಾರ್
ಅಂಮ್ರಿತ್ ಬಚನ್ ಹರಿ ಕೇ ಗುನ್ ಗಾಉ
ಪ್ರಾನ್ ತರನ್ ಕಾ ಇಹೈ ಸುಆಉ
ಆಠ್ ಪಹರ್ ಪ್ರಭ್ ಪೇಖಹು ನೇರಾ
ಮಿಟೈ ಅಗಿ ಆನು ಬಿನಸೈ ಅಂಧೇರಾ
ಸುನಿ ಉಪದೇಸು ಹಿರ್‌ದೈ ಬಸಾವಹು
ಮನ್ ಇಛೇ ನಾನಕ್ ಫಲ್ ಪಾವಹು ॥ 5 ॥

22/6

ಹಲತು ಪಲತು ದುಇ ಲೇಹು ಸವಾರಿ
ರಾಮ್ ನಾಮ್ ಅಂತರಿ ಉರಿ ಧಾರಿ
ಪೂರೇ ಗುರ್ ಕೀ ಪೂರೀ ದಿಖಿಆ
ಜಿಸ್ ಮನಿ ಬಸೈ ತಿಸು ಸಾಚ್ ಪರೀಖಿಆ
ಮನಿ ತನಿ ನಾಮು ಜಪಹು ಲಿವ್ ಲಾಇ
ದುಖ್ ದರದ್ ಮನ್ ತೇ ಭಉ ಜಾಇ
ಸಚ್ ವಾಪಾರು ಕರ್‌ಹು ವಾಪಾರೀ
ದರ್‌ಗಹ್ ನಿಬಹೈ ಖೇಪ್ ತುಮಹಾರೀ
ಏಕಾ ಟೇಕ್ ರಖ್‌ಹು ಮನ್ ಮಾಹಿ
ನಾನಕ್ ಬಹುರಿ ನ ಆವಹಿ ಜಾಹಿ ॥ 6 ॥

22/7

ತಿಸ್ ತೇ ದೂರಿ ಕಹಾ ಕೋ ಜಾಇ
ಉಬರೈ ರಾಖನಹಾರ್ ಧಿಆಇ
ನಿರ್‌ಭಯ್ ಜಪೈ ಸಗಲ್ ಭಉ ಮಿಟೈ
ಪ್ರಭ್ ಕಿರ್‌ಪಾ ತೇ ಪ್ರಾಣೀ ಛುಟೈ
ಜಿಸ್ ಪ್ರಭು ರಾಖೈ ತಿಸು ನಾಹೀ ದೂಖ್
ನಾಮ್ ಜಪತ್ ಮನಿ ಹೋವತ್ ಸೂಖ್

22/3

ಅವನು ದಯಾಳು, ಪ್ರತ್ಯೇಕ ಸ್ಥಾನದಲಿ ಪರಿಪೂರ್ಣ
ಅವನೆಲ್ಲರಲ್ಲೂ ಅತಿ ಕೃಪಾಪೂರ್ಣ
ತನ್ನ ಕರ್ತವ್ಯವನ್ನು ತಾನೇ ತಿಳಿದಿರುವನು
ಅವನು ಅಂತರ್ಯಾಮಿ ಸರ್ವವ್ಯಾಪಕನು
ಜೀವಿಗಳನು ವಿವಿಧರೀತಿ ಪೊರೆಯುವನು
ತನ್ನ ಸೃಷ್ಟಿಗಳನು ತಾನು ಸ್ಮರಿಸುವನು
ಅವನಿಷ್ಟದವರನ್ನು ಒಡನಿರಿಸಿಕೊಳ್ಳುವನು
ಭಕ್ತಿಯಿಂದಾತನು ಹರಿಗುಣವ ಹಾಡುವನು
ಹೃದಯಾಂತರದಲಿ ವಿಶ್ವಾಸ ಹೊಂದಿರುವವನು
ನಾನಕ, ಮಾಡುವನೊಬ್ಬನೇ ದೇವನೆಂದು ತಿಳಿದಿಹನು ॥ 3 ॥

22/4

ಭಕ್ತ ಹರಿನಾಮ ಒಂದನೇ ನಂಬಿರಲು
ವ್ಯರ್ಥವಾಗದು ಅವನಾಸೆ ಆಕಾಂಕ್ಷೆಗಳು
ದಾಸನಿಗೆ ಸೇವೆ ಸಲ್ಲಿಸುವುದೇ ಆಗಿ ಬಂದಿಹುದು
ಪರಮಪದದೊಳಿರಲು ಆಜ್ಞಾಕಾರಿಯನು ತಿಳಿದು
ಇದಕಿಂತ ಹೆಚ್ಚು ವಿಚಾರ ಮತ್ತೇನೂ ಇಲ್ಲ
ಅವನ ಹೃದಯದ ಅಕಾಲಪುರುಷನೇ ಎಲ್ಲ
ಅವನು ಬಂಧನಮುಕ್ತ ನಿರ್ವೈರಿಯಾಗಿಹನು
ಅನುದಿನ ಗುರುಚರಣವನ್ನು ಪೂಜಿಸುವನು
ಇಹಪರಗಳಲ್ಲಿ ಅವನು ಸುಖಿಯಾಗಿರುವನು
ನಾನಕನೆ ! ಹರಿ ಪ್ರಭು ಅಲ್ಲಿ ಸ್ವಯಂ ಸೇರಿರುವನು ॥ 4 ॥

22/5

ಸಂತರ ಸಂಗ ಸೇರಿ ಅನುಭವಿಸು ಆನಂದ
ಹರಿಗುಣ ಹಾಡು ಹರಿಗೆ ಪರಮಾನಂದ

 

22/3

ಪೂರನ್ ಪೂರಿ ರಹೇ ದಯಾಲ್
ಸಭ್ ಊಪರಿ ಹೋವತ್ ಕಿರ್‌ಪಾಲ್
ಅಪನೇ ಕರ್‌ತಬ್ ಜಾನೈ ಆಪಿ
ಅಂತರ್ ಜಾಮೀ ರಹಿಓ ಬಿ ಆಪಿ
ಪ್ರತಿಪಾಲೈ ಜೀಅನ್ ಬಹು ಭಾತಿ
ಜೋ ಜೋ ರಚಿಓ ಸು ತಿಸ್‌ಹಿ ಧಿಆತಿ
ಜಿಸ್ ಭಾವೈ ಲಏ ಮಿಲಾಏ
ಭಗತಿ ಕರ್‌ಹಿ ಹರಿಕೆ ಗುಣ್ ಗಾಇ
ಮನ್ ಅಂತರಿ ವಿಸ್ವಾಸ ಕರಿ ಮಾನಿಆ
ಕರನ್ ಹಾರ್ ನಾನಕ್ ಇಕ್ ಜಾನಿಆ ॥ 3 ॥

22/4

ಜನ್ ಲಾಗಾ ಹರಿ ಏಕೈ ನಾಇ
ತಿಸ್ ಕಿ ಆಸ್ ನ ಬಿರ್‌ಥೀ ಜಾಇ
ಸೇವಕ್ ಕಉ ಸೇವಾ ಬನಿ ಆಈ
ಹುಕಮ್ ಬೂಝಿ ಪರಮ್ ಪದ್ ಪಾಈ
ಇಸ್ ತೇ ಊಪರಿ ನಹೀ ಬೀಚಾರ್
ಜಾಕೈ ಮನಿ ಬಸಿಆ ನಿರಂಕಾರ್
ಬಂಧನ್ ತೋರಿ ಭಏ ನಿರ್‌ವೈರ್
ಅನ್‌ದಿನ್ ಪೂಜಹಿ ಗುರ್ ಕೇ ಪೈರ್
ಇಹ್ ಲೋಕ್ ಸುಖೀಏ ಪರ್‌ಲೋಕ್ ಸುಹೇಲೇ
ನಾನಕ್ ಹರಿ ಪ್ರಭಿ ಆಪೇ ಮೇಲೇ ॥ 4 ॥

22/5

ಸಾಧ್ ಸಂಗಿ ಮಿಲಿ ಕರ್‌ಹು ಅನಂದ್
ಗುನ್ ಗಾವಹು ಪ್ರಭ್ ಪರಮಾನಂದ್

ಶ್ಲೋಕ :

ಜೀವ ಜಂತುಗಳ ಪರಮೇಶ್ವರನು
ತಾನೇ ಪ್ರವರ್ತಕನಾಗಿರಲು
ಮತ್ತೊಬ್ಬನೆಲ್ಲಿ ಕಂಡುಬರುವನು
ಅವನೊಬ್ಬನೇ ವ್ಯಾಪಕನಾಗಿರಲು

ಅಷ್ಟಪದಿ—22

ಹೇಳುವನವನು, ಕೇಳುವನವನು
ಅವನೊಬ್ಬನೆ ವಿಸ್ತೃತನಾಗಿಹನು
ಅವನಿಗಿಷ್ಟವಾದುದನು ಸೃಷ್ಟಿಸಿಕೊಳುವನು
ಅವನಿಷ್ಟದಂತೆ ತನ್ನಲೇ ಇರಿಸಿಕೊಳುವನು
ನಿನ್ನಿಂದ ಭಿನ್ನವಾಗಿ ಅವನಿಗೇನೂ ಆಗದು
ಅವನ ವಿಶ್ವವೆಲ್ಲ ನಿನ್ನ ಪ್ರಬಂಧದಲ್ಲಿಹುದು
ಎಲ್ಲಿ ಪ್ರಭು ತಾನೇ ತಿಳಿಸುವನೋ
ಆ ಮನುಷ್ಯ ಸತ್ಯವಾದ ಹೆಸರು ಗಳಿಸುವನು
ಅವನು ಸಮದರ್ಶಿ, ವಾಸ್ತವಿಕತೆ ತಿಳಿದವನು
ನಾನಕನೆ ! ಅವನು ಪ್ರಪಂಚವನ್ನೆಲ್ಲಾ ಜಯಿಸಿದವನು ॥ 1 ॥

22/2

ಎಲ್ಲಾ ಜೀವಜಂತುಗಳಲೂ ಇರುವುದವನ ಹಸ್ತ
ಅವನು ದೀನ ದಯಾಮಯ, ಅನಾಥರ ಏಕನಾಥ
ಅವನು ರಕ್ಷಿಸುವನನ್ನು ಯಾರೂ ಕೊಲ್ಲಲಾರರು
ಹೆಣದಂಥವರು ಮನದಿಂದಾತನ ಮರೆತವರು
ಅವನನ್ನು ಬಿಟ್ಟು ಯಾರೂ ಎಲ್ಲೂ ಹೋಗಲಾರರು
ಎಲ್ಲರ ಶಿರ ಬೆಳಗುತಿರುವನೊಬ್ಬ ದೇವರು
ಎಲ್ಲಾ ಜೀವಿಗಳ ಪರಿಜ್ಞಾನ ಅವನ ಹಸ್ತದಲ್ಲಿರುವುದು
ಒಳಗೂ ಹೊರಗೂ ಸದಾ ತಿಳಿಅವನ ಜೊತೆಯಲ್ಲಿರುವುದು
ಅವನು ಗುಣಗಳ ಭಂಡಾರ ಅಂತವಿಲ್ಲದವನು
ನಾನಕದಾಸ ಸದಾ ಅವನಿಗರ್ಪಿತನೆನ್ನುವನು ॥ 2 ॥

ಸಲೋಕು :

ಜೀಅ ಜಂತ್ ಕೆ ಠಾಕುರಾ
ಆಪೇ ವರ್‌ತಣ್‌ಹಾರ್
ನಾನಕ್ ಏಕೋ ಪಸರಿಆ
ದೂಜಾ ಕಹ್ ದ್ರಿಸ್‌ಟಾರ್

ಅಸಟ್‌ಪದಿ—22

ಆಪಿ ಕಥೈ ಆಪಿ ಸುನನೈಹಾರ್
ಆಪಹಿ ಏಕ್ ಆಪಿ ಬಿಸ್‌ಥಾರ್
ಜಾತಿಸು ಭಾವೈ ತಾ ಸ್ರಿಸ್‌ಟಿ ಉಪಾಏ
ಆಪನೈ ಭಾಣೈ ಲಏ ಸಮಾಏ
ತುಮ್ ತೇ ಭಿನ್ ನಹೀ ಕಿಛು ಹೋಇ
ಆಪನ್ ಸೂತಿ ಸಭು ಜಗತ್ ಪರೋಇ
ಜಾ ಕಉ ಪ್ರಭ್ ಜೀಉ ಆಪಿ ಬುಝಾಏ
ಸಚ್ ನಾಮ್ ಸೋಈ ಜನ್ ಪಾಏ
ಸೋ ಸಮದರಸೀ ತತ್ ಕಾ ಬೇತಾ
ನಾನಕ್ ಸಗಲ್ ಸ್ರಿಸ್‌ಟಿ ಕಾ ಜೇತಾ ॥ 1 ॥

22/2

ಜೀಅ ಜಂತ್ರ ಸಭ್ ತಾಕೈ ಹಾಥ್
ದೀನ್ ದಯಾಲ್ ಅನಾಥ್ ಕೋ ನಾಥ್
ಜಿಸ್ ರಾಖೈ ತಿಸ್‌ಕೋಇ ನ ಮಾರೈ
ಸೋ ಮೂಆ ಜಿಸ್ ಮನ್‌ಹು ಬಿಸಾರೈ
ತಿಸ್ ತಜಿ ಅವರ್ ಕಹಾ ಕೋ ಜಾಇ
ಸಭ್ ಸಿರಿ ಏಕ್ ನಿರಂಜನ್ ರಾಇ
ಜೀಅ ಕಿ ಜುಗತಿ ಜಾ ಕೈ ಸಭ್ ಹಾಥಿ
ಅಂತರಿ ಬಾಹರಿ ಜಾನಹು ಸಾಥಿ
ಗುನ್ ನಿಧಾನ್ ಬೇಅಂತ್ ಅಪಾರ್
ನಾನಕ್ ದಾಸ್ ಸದಾ ಬಲಿಹಾರ್ ॥ 2 ॥

ತನಗೆ ತನ್ನಲ್ಲಿ ಪೂರ್ಣ ವಿಶ್ವಾಸವಿರಲು
ಆಗ ಉಪದೇಶಿಸುವರಾರು? ಆದನು ಕೇಳುವರೆಲ್ಲಿ?
ಪರಮಾತ್ಮ ಅನಂತನು ಉನ್ನತರಲ್ಲಿ ಅತ್ಯುನ್ನತನು
ನಾನಕನೆ, ಅವನು ಸೇರಿಹನು ತಾನೇ ತಾನಾಗಿ ತನ್ನನ್ನು ॥ 6 ॥

21/7

ಅವನು ಸ್ವಯಂ ರಚಿಸಿದನು ಪ್ರಪಂಚದಾಕಾರವನು
ತ್ರಿಗುಣಾತೀತನಾಗಿ ಪೂರ್ಣ ವಿಸ್ತರಿಸಿದನದನು
ಆಗ ಪಾಪ ಪುಣ್ಯಗಳ ಮಾತು ಆರಂಭವಾಯಿತು
ಸ್ವರ್ಗ ನರಕಗಳ ಸುಖ ದುಃಖ ಸಹ ಬಂದು ಸೇರಿತು
ಮಾನವನ ಸಂತಾನ ಮಾಯಾಜಾಲಕ್ಕೊಳಗಾಯಿತು
ಅಹಂ ಮೋಹ ಭ್ರಮೆ ಭಯ ಸೇರಿ ಭಾರವಾಯಿತು
ಸುಖ ದುಃಖ ಮಾನ ಅಪಮಾನಗಳನ್ನು
ಅನೇಕ ರೀತಿಗಳಲ್ಲಿ ವ್ಯಾಖ್ಯಾನಿಸಿದ್ದಾಯಿತು
ಪ್ರಭು ತನ್ನ ಆಟಗಳನ್ನು ತಾನೇ ಆಡಿ ನೋಡುವನು
ಆಟ ನಿಲ್ಲಿಸಿದರೆ ನಾನಕನೆ! ಉಳಿವನೇ ಅವನೊಬ್ಬನು ॥ 7 ॥

21/8

ಒಳ್ಳೆಯ ಭಕ್ತನಿರುವೆಡೆ ದೇವನೇ ಅಡಗಿಹನು
ಸಂತರ ಪ್ರತಾಪವಿರುವೆಡೆ ತಾನೂ ಪಸರಿಸಿರುವನು
ಎರಡು ಪಕ್ಷಗಳಿಗೂ ಸ್ವಯಂ ಧಣಿ ಅವನು
ಅವನ ಶೋಭೆಯನು ಬೆಳಗುವ ಗಣಿ ಅವನು
ತಾನೇ ಕೌತುಕಗಳ ನಡೆಸಿ ಆನಂದದಿಂದಿಹನು
ಸ್ವಯಂ ರಸ ಸ್ವಾದಿಸುತ ಇದ್ದೂ ಇರದಂತಿಹನು
ಅವನಿಷ್ಟಪಡುವರನ್ನು ತನ್ನ ನಾಮದಲ್ಲಿಡುವನು
ಅವನಿಷ್ಟಪಡುವರೊಡನೆ ಸ್ವಯಂ ನಕ್ಕು ನಲಿಯುವನು
ಅಗಣಿತ ಅಪಾರ ಅಸಂಖ್ಯ ಅಭಾರ ಈಶ್ವರನು
ಅವನು ಕರೆದಂತಿರುವನೆನುವ ದಾಸ ನಾನಕನು ॥ 8 ॥

 

ಜಹ್ ಆಪನ್ ಆಪು ಆಪಿ ಪತೀಆರಾ
ತಹ್ ಕಉನ್ ಕಥೈ ಕಉನ್ ಸುನ್ನೈಹಾರಾ
ಬಹು ಬೇಅಂತ್ ಊಚ್ ತೇ ಊಚಾ
ನಾನಕ್ ಆಪಸ್ ಕಉ ಆಪಹಿ ಪಹೂಚಾ ॥ 6 ॥

21/7

ಜಹ್ ಆಪಿ ರಚಿಓ ಪರ್‌ಪಂಚು ಅಕಾರು
ತಿಹು ಗುಣ್ ಮಹಿ ಕೀನೋ ಬಿಸ್‌ಥಾರು
ಪಾಪ್ ಪೂನು ತಹ್ ಭಈ ಕಹಾವತ್
ಕೋಊ ನರಕ್ ಕೋಊ ಸುರಗ್ ಬಂಛಾವತ್
ಆಲ್ ಜಾಲ್ ಮಾಯಾ ಜಂಜಾಲ್
ಹಉಮೈ ಮೋಹ್ ಭರಮ್ ಭೈ ಭಾರ್
ದೂಖ್ ಸೂಖ್ ಮಾನ್ ಅಪ್‌ಮಾನ್
ಅನಿಕ್ ಪ್ರಕಾರ್ ಕಿಓ ಬಖ್ಯಾನ್
ಆಪನ್ ಖೇಲಾ ಆಪಿ ಕರಿ ದೇಖೈ
ಖೇಲ್ ಸಂಕೋಚೈ ತಉ ನಾನಕ್ ಏಕೈ ॥ 7 ॥

21/8

ಜಹ್ ಅಬಿಗತ್ ಭಗತ್ ತಹ್ ಆಪಿ
ಜಹ್ ಪಸರೈ ಪಾಸಾರು ಸಂತ್ ಪರ್‌ತಾಪಿ
ದುಹೂ ಪಾಖ್‌ಕಾ ಆಪ್‌ಹಿ ಧನೀ
ಉನ್ ಕೀ ಸೋಭಾ ಉನಹೂ ಬನೀ
ಆಪ್‌ಹಿ ಕಉತಕ್ ಕರೈ ಅನದ್ ಚೋಜ್
ಆಪ್‌ಹಿ ರಸ್ ಭೋಗನ್ ನಿರ್‌ಜೋಗ್
ಜಿಸ್ ಭಾವೈ ತಿಸು ಆಪನ್ ನಾಇ ಲಾವೈ
ಜಿಸ್ ಭಾವೈ ತಿಸು ಖೇಲ್ ಖಿಲಾವೈ
ಬೇಸುಮಾರ್ ಅಥಾಹ್ ಅಗನತ್ ಅತೋಲೈ
ಜಿಉ ಬುಲಾವಹು ತಿಉ ನಾನಕ್‌ದಾಸ್ ಬೋಲೈ ॥ 8 ॥

ನಿರಂಜನ ನಿರಾಕಾರಿಯೇ ನಿರ್ವಾಣದಲ್ಲಿರಲು
ಮಾನಾಪಮಾನ ಅಹಂಕಾರವೆಲ್ಲಿತ್ತು ?
ಕೇವಲ ಜಗದೀಶನೇ ಸ್ವಸ್ವರೂಪದಲ್ಲಿರಲು
ರಾಗ ದ್ವೇಶಗಳ ದೋಷವೆಲ್ಲಿತ್ತು ?
ಜ್ಯೋತಿ ಸ್ವರೂಪಿ ಪ್ರಭುವೇ ಜ್ಯೋತಿಯೊಡನಿರಲು
ಹಸಿವು ದಾಹ ತೃಪ್ತಿಗಳೆಲ್ಲಿತ್ತು ?
ಮಾಡಿ ಮಾಡಿಸುವನೇ ಪ್ರಭುವಾಗಿರಲು
ನಾನಕನೆ ! ಜಗದೀಶ್ವರನೇ ಅನಂತ ಕಾರ್ಯಕಾರನು ‖ 4 ‖

21/5

ಅವನು ತನ್ನ ಕೀರ್ತಿಯನ್ನು ತಾನೇ ತಾನು ಬೆಳಗಿರಲು
ಆಗ ಯಾರು ತಾಯಿ ತಂದೆ ಬಂಧು ಮಿತ್ರ ಮಕ್ಕಳು ?
ಅವನೂ ತಾನೇ ಸರ್ವ ಕಲಾ ಪ್ರವೀಣನಾಗಿ ನಿಂತಿರಲು
ಆಗ ಇತ್ತೆಲ್ಲಿ ವೇದ ಕುರಾನು ಗ್ರಂಥಗಳನರಿಯಲು ?
ಅವನು ತಾನೇ ತನ್ನನ್ನು ಹೃದಯದಲಿ ಧರಿಸಿರಲು
ಆಗ ಶಕುನ-ಅಪಶಕುನ ಎಲ್ಲಿತ್ತು ಯೋಚಿಸಲು ?
ಅವನೇ ದೂರದಲ್ಲಿ ಮತ್ತು ಹತ್ತಿರದಲ್ಲಿರಲು
ಹೇಗಾಗುವುದು ಒಡೆಯನಾರು ಸೇವಕನಾರೆಂದೆನಲು ?
ಆಶ್ಚರ್ಯಕರ ದೇವಲೀಲೆಗಳಿಗೆ ನರ ಬೆರಗಿಹನು
ನಾನಕನೆ, ಅವನ ಸ್ಥಿತಿಗಳನು ಅವನೇ ಬಲ್ಲನು ‖ 5 ‖

21/6

ಅವನೇ ಅಖಿಲ ಅಭೇದ್ಯ ಅಭೇದ್ಯನಾಗಿರಲು
ಅಲ್ಲಿ ಮಾಯೆಯ ಪ್ರಭಾವ ಯಾರ ಮೇಲಿತ್ತು ?
ಅವನು ತಾನೇ ತನ್ನನ್ನು ನಮಸ್ಕರಿಸಿಕೊಳುತಿರಲು
ಆಗ ಅಲ್ಲಿ ಸತ್ವ ರಜ ತಮೋಗುಣಗಳಿರಲ್ಲಿಲ್ಲ
ಒಬ್ಬನೇ ಒಬ್ಬ ಭಗವಂತ ಒಬ್ಬನೇ ಇರಲು
ಆಗ ನಿಶ್ಚಿಂತನಾರು ? ಮತ್ತು ಚಿಂತಾಗ್ರಸ್ತನೆಲ್ಲಿ ?

ಜಹ್ ನಿರಂಜನ್ ನಿರಂಕಾರ್ ನಿರ್‌ಬಾನ್
ತಹ್ ಕಉನ್ ಕಉ ಮಾನ್ ಕಉನ್ ಅಭಿಮಾನ್
ಜಹ್ ಸರೂಪ್ ಕೇವಲ್ ಜಗ್‌ದೀಸ್
ತಹ್ ಛಲ್ ಛಿದ್ರ್ ಲಗತ್ ಕಹು ಕೀಸ್
ಜಹ್ ಜೋತಿ ಸರೂಪಿ ಜೋತಿ ಸಂಗಿ ಸಮಾವೈ
ತಹಿ ಕಿಸಹಿ ಭೂಖ್ ಕವನು ತ್ರಿಪತಾವೈ
ಕರನ್ ಕರಾವನ್ ಕರನೈಹಾರು
ನಾನಕ್ ಕರ್‌ತೇ ಕಾ ನಾಹಿ ಸುಮಾರು ॥ 4 ॥

21/5

ಜಬ್ ಅಪನೀ ಸೋಭಾ ಆಪನ್ ಸಂಗಿ ಬನಾಈ
ತಬ್ ಕವನ್ ಮಾಇ ಬಾಪ್ ಮಿತ್ರ್ ಸುತ್ ಭಾಈ
ಜಹ್ ಸರಬ್ ಕಲಾ ಆಪಹಿ ಪರ್‌ಬೀನ್
ತಹ್ ಬೇದ್ ಕತೇಬ್ ಕಹಾ ಕೋಊ ಚೀನ್
ಜಬ್ ಆಪನ್ ಆಪ್ ಆಪಿ ಉರಿಧಾರೈ
ತಉ ಸಗನ್ ಅಪ್‌ಸಗನ್ ಕಹಾ ಬಿಚಾರೈ
ಜಹ್ ಆಪನ್ ಊಚ್ ಆಪನ್ ಆಪಿ ನೇರಾ
ತಹ್ ಕಉನ್ ಠಾಕುರು ಕಉನು ಕಹೀಐ ಚೇರಾ
ಬಿಸ್‌ಮನ್ ಬಿಸಮ್ ರಹೇ ಬಿಸ್‌ಮಾದ್
ನಾನಕ್ ಅಪನೀ ಗತಿ ಜಾನಹು ಆಪಿ ॥ 5 ।

21/6

ಜಹ್ ಅಛಲ್ ಅಛೇದ್ ಅಭೇದ್ ಸಮಾಇಆ
ಊಹಾ ಕಿಸ್‌ಹಿ ಬಿ ಆಪತ್ ಮಾಇಆ
ಆಪಸ್ ಕಉ ಆಪಹಿ ಆದೇಸು
ತಿಹು ಗುಣ್ ಕಾ ನಾಹೀ ಪರ್‌ಬೇಸು
ಜಹ್ ಏಕಹಿ ಏಕ್ ಏಕ್ ಭಗವಂತಾ
ತಹ್ ಕಉನ್ ಅಚಿಂತು ಕಿಸು ಲಾಗೈ ಚಿಂತಾ

21/2

ಈಶ್ವರನೇ ಕೇವಲ ಶ್ರೀಮಂತನಾಗಿರಲು
ಬಂಧನ, ಮುಕ್ತಿ ಇರುವುದು ಯಾರಿಗೆಂದು ?
ಹರಿಯೊಬ್ಬನೇ ಅಗಮ ಅಪಾರನಾಗಿರಲು
ಸ್ವರ್ಗ ನರಕ ಅವತಾರವೆಲ್ಲಿಹುದು ?
ನಿರ್ಗುಣ ಪ್ರಭು ಸಹಜ ಸ್ವಭಾವದಲ್ಲಿರಲು
ಹೇಳು ಈಶ್ವರನೊಡನೆ ಮಾಯೆ ಎಲ್ಲಿಹಳು ?
ಪ್ರಭು ತಾನೇ ತಾನಾಗಿ ಸ್ವಯಂ ಪ್ರಕಾಶದಲ್ಲಿರಲು
ಆಗ ಯಾರು ಯಾರಿಗೆ ಹೆದರಬೇಕಾಗಿಹುದು ?
ತನ್ನ ಆಶ್ಚರ್ಯದಾಟಗಳ ತೋರುವನು ತಾನೇ
ಅಗಮ ಅಪಾರನೆನ್ನುವನು ನಾನಕ ಪರಮಾತ್ಮನನು ॥ 2 ॥

21/3

ಸುಖಾಸನದಲ್ಲಿ ಅವಿನಾಶಿಯೇ ಕುಳಿತಿರಲು
ಹೇಳಿಲ್ಲಿ ಜನನ-ಮರಣ ವಿನಾಶವಾಗಿತ್ತು ?
ಪರಿಪೂರ್ಣ ಪರಮಾತ್ಮ ಸ್ವಯಂ ಪ್ರಭುವಾಗಿರಲು
ಹೇಳಾಗ ಯಮನ ಭಯವೆಲ್ಲಿ ಯಾರಿಗಿತ್ತು ?
ಅರಿವಿಗೆ ದೊರಕದ ಪ್ರಭುವೇ ಅಚಲನಾಗಿರಲು
ಹೇಳಿಲ್ಲಿ ಚಿತ್ರಗುಪ್ತನ ಬರಹವಿತ್ತು ?
ಅಗಾಧ ಅಗೋಚರ ನಾಥ ನಿರಂಜನನಿರಲು
ಯಾರಿಗೆ ಬಿಡುಗಡೆ ಯಾರಿಗೆ ಬಂಧನವಿತ್ತು ?
ಪ್ರಭುವೇ ಸ್ವಯಂ ತಾನು ಆಶ್ಚರ್ಯಶೀಲನಾಗಿರಲು
ನಾನಕನೆ, ಪ್ರಭು ತಾನೇ ತನ್ನ ರೂಪ ಬಿತ್ತರಿಸಿಹನೆಲ್ಲೆಲ್ಲೂ ॥ 3 ॥

21/4

ನಿರ್ಮಲ ಪ್ರಭುವೇ ಪುರುಷ ಶ್ರೇಷ್ಠನಾಗಿರಲು
ನಿರ್ಮಲ ವಸ್ತ್ರವನು ಒಗೆಯುವುದೆಲ್ಲಿತ್ತು ?

21/2

ಜಬ್ ಹೋವತ್ ಪ್ರಭು ಕೇವಲ್ ಧನೀ
ತಬ್ ಬಂಧ್ ಮುಕ್‌ತಿ ಕಹ್ ಕಿಸ್ ಕಉ ಗನೀ
ಜಬ್ ಏಕಹೀ ಹರಿ ಅಗಮ್ ಅಪಾರ್
ತಬ್ ನರಕ್ ಸುರಗ್ ಕಹ್ ಕಉನ್ ಅಉತಾರ್
ಜಬ್ ನಿರ್‌ಗುನ್ ಪ್ರಭು ಸಹಜ್ ಸುಭಾಇ
ತಬ್ ಸಿವ್ ಸಕ್‌ತಿ ಕಹಹು ಕಿತು ಠಾಇ
ಜಬ್ ಆಪಹಿ ಆಪಿ ಅಪನೀ ಜೋತಿ ಧರೈ
ತಬ್ ಕವನ್ ನಿಡರ್ ಕವನ್ ಕತ್ ಡರೈ
ಆಪನ್ ಚಲಿತ್ ಆಪಿ ಕರ್‌ನೈಹಾರ್
ನಾನಕ್ ಠಾಕುರ್ ಅಗಮ್ ಅಪಾರ್ ॥ 2 ॥

21/3

ಅಬಿನಾಸೀ ಸುಖ್ ಆಪನ್ ಆಸನ್
ತಹ್ ಜನಮ್ ಮರನ್ ಕಹ್ ಕಹಾ ಬಿನಾಸನ್
ಜಬ್ ಪೂರನ್ ಕರ್‌ತಾ ಪ್ರಭು ಸೋಇ
ತಬ್ ಜಮ್ ಕೀ ತ್ರಾಸ್ ಕಹೋ ಕಿಸೇ ಹೋಇ
ಜಬ್ ಅಬಿಗತ್ ಅಗೋಚರ್ ಪ್ರಭ್ ಏಕಾ
ತಬ್ ಚಿತ್ರ್‌ಗುಪತ್ ಕಿಸೆ ಪೂಛತ್ ಲೇಖಾ
ಜಬ್ ನಾಥ್ ನಿರಂಜನ್ ಅಗೋಚರ್ ಅಗಾಧೇ
ತಬ್ ಕೌನ್ ಛುಟೇ ಕೌನ್ ಬಂಧನ್ ಬಾಧೇ
ಆಪನ್ ಆಪ್ ಆಪ್‌ಹೀ ಅಚ್‌ರಜಾ
ನಾನಕ್ ಆಪನ್ ರೂಪ್ ಆಪ್‌ಹೀ ಉಪ್‌ರಜಾ ॥ 3 ॥

21/4

ಜಹ್ ನಿರ್‌ಮಲ್ ಪುರಖ್ ಪುರಖ್ ಪತಿ ಹೋತಾ
ತಹ್ ಬಿನ್ ಮೈಲ್ ಕಹಹು ಕಿಆ ಧೋತಾ

ಅವನಿಗೆ ರಾಜಭೋಗ ಬ್ರಹ್ಮಾನಂದ
ಹರಿನಾಮದ ಕಥೆ ಮನಕಾನಂದ
ಅವನಿಗಿದೆ ಮೃಷ್ಟಾನ್ನ ವಸ್ತ್ರ ಸಂಗೀತ
ನಾಲಿಗೆ ಹರಿ ಹರಿ ಜಪಿಸುತ್ತ
ಸು ಕರ್ಮದೊಡನೆ ಅವನು ಧನವಂತ
ಹೃದಯದಲ್ಲಿದೆ ಪೂರ್ಣ ಗುರು ಮಂತ್ರ
ಸಾಧು ಸಂಗದಿಂದಿಡು ಮನ ಮಂದಹಾಸ
ನಾನಕ, ಸುಖಾನಂದದಲ್ಲಿದೆ ಉಜ್ವಲ ಪ್ರಕಾಶ ॥ 8 ॥

ಸಲೋಕು :

ಎಲ್ಲಾ ಸ್ವರೂಪದವನು, ರೂಪಹೀನ ನಿರಾಕಾರನು
ಸ್ವಯಂ ಶೂನ್ಯ ಸಮಾಧಿಯಲ್ಲಿರುವವನು
ಹೇ ನಾನಕ ! ಅವನೇ ಮಾಡಿಹನೆಲ್ಲವನು
ಮತ್ತವನೇ ಜಪಿಸಿ ಸ್ವಯಂ ಜಪಿಸಿಸುವನು

ಅಷ್ಟಪದಿ—21

ಅಖಂಡ ಬ್ರಹ್ಮಾಂಡದ ಸೃಷ್ಟಿ ಅಗೋಚರವಾಗಿರಲು
ಎಲ್ಲಿ ಯಾರಲ್ಲಿತ್ತು ಆಗ ಪಾಪ ಪುಣ್ಯ ತೋರಲು
ಸ್ವಯಂ ಆತನು ಆಗ ಶೂನ ಸ...ಾಧಿಯಲ್ಲಿರಲು
ಅಲ್ಲಿ ಯಾರಲ್ಲೂ ವೈರ ವಿರೋಧವಿರಲಿಲ್ಲ
ಜೀವನದ ವರ್ಣ ಸ್ವರೂಪವೇ ಅರಿವಾಗದಿರಲು
ಆಗ ಸುಖ ದುಃಖಕ್ಕೆ ವ್ಯಾಪಕತೆಯೇ ಇರಲಿಲ್ಲ
ತಾನೇ ತಾನು ತಾನಾಗಿ ಆದ ಪರಬ್ರಹ್ಮ
ಅಲ್ಲಿ ಇಹುದಾದರೆಲ್ಲಿ ಮೋಹ ಯಾರೊಡನೆ ಭ್ರಮೆ
ಜೀವನ ನಾಟಕದ ಆಟದಲ್ಲಿ ತಾನೇ ವಾ...ಕನು
ನಾನಕ ಎಂದೂ ಎಲ್ಲೂ ಮತ್ತಾರೂ ಆಡಲಾರರಿದನು ॥ 1 ॥

ಅನಿಕ್ ರಾಜ್ ಭೋಗ್ ಬಡಿಆಈ
ಹರಿ ಕೇ ನಾಮ್ ಕೀ ಕಥಾ ಮನಿ ಭಾಈ
ಬಹು ಭೋಜನ್ ಕಾಪರ್ ಸಂಗೀತ್
ರಸನಾ ಜಪತೀ ಹರಿ ಹರಿ ನೀತ್
ಭಲೀ ಸು ಕರನೀ ಸೋಭಾ ಧನ್‌ವಂತ್
ಹಿರ್‌ದೈ ಬಸೆ ಪೂರನ್ ಗುರ್ ಮಂತ್
ಸಾಧ್ ಸಂಗಿ ಪ್ರಭ್ ದೇಹು ನಿವಾಸ್
ಸರಬ್ ಸೂಖ್ ನಾನಕ್ ಪರ್‌ಗಾಸ್ ॥ 8 ॥

ಸಲೋಕು :

ಸರ್‌ಗುನ್ ನಿರ್‌ಗುನ್ ನಿರಂಕಾರ್
ಸುಂನ್ ಸಮಾಧಿ ಆಪಿ
ಆಪನ್ ಕೀಆ ನಾನಕಾ
ಆಪೇ ಹೀ ಫಿರಿ ಜಾಪಿ

ಅಸಟ್‌ಪದಿ—21

ಜಬ್ ಅಕಾರ್ ಇಹ್ ಕಛು ನ ದ್ರಿಸ್‌ಟೇತಾ
ಪಾಪ್ ಪುಂನ್ ತಬ್ ಕಹತೇ ಹೋತಾ
ಜಬ್ ಧಾರೀ ಆಪನ್ ಸುಂನ್ ಸಮಾಧಿ
ತಬ್ ವೈರ್ ವಿರೋಧ್ ಕಿಸ್ ಸಂಗಿ ಕಮಾತಿ
ಜಬ್ ಇಸ್‌ಕಾ ಬರನ್ ಚಿಹನ್ ನ ಜಾಪತ್
ತಬ್ ಹರಖ್ ಸೋಗ್ ಕಹ್ ಕಿಸ್‌ಹಿ ಬಿ ಆಪತ್
ಜಬ್ ಆಪನ್ ಆಪ್ ಆಪಿ ಪಾರ್‌ಬ್ರಹಮ್
ತಬ್ ಮೋಹ್ ಕಹಾ ಕಿಸ್ ಹೋವತ್ ಭರಮ್
ಆಪನ್ ಖೇಲು ಆಪಿ ವರ್‌ತೀಜಾ
ನಾನಕ್ ಕರ್‌ನೈಹಾರು ನ ದೂಜಾ ॥ 1 ॥

20/6

ಪ್ರೀತಿಯಂಕುರ ಮೊಳೆತು ಪ್ರೇಮರಸ ಹೊರಬಂದಿದೆ
ತನು ಮನದಂತರದಲಿ ಸ್ವಾದ ತುಂಬಿ ಹರಿದಿದೆ
ಕಣ್ಣಿಗೆ ದರ್ಶನ ಲಭಿಸಿ ಏನೋ ಸುಖವಾಗುತಿದೆ
ಸಂತರ ಪಾದ ತೊಳೆದು ಮನ ಪ್ರಸನ್ನವಾಗುತಿದೆ
ಭಕ್ತರ ತನುಮನದಲಿ ಆನಂದವಾಗುತಿದೆ
ಕೆಲವರಿಗೆಲ್ಲೋ ಸಂತರ ಸಂಗ ಲಭಿಸುತಿದೆ
ಹೇ ಪ್ರಭು ! ದಯಾಮಯ ನೀಡೆಮಗೊಂದು ವಸ್ತುವನು
ಗುರು ಕೃಪೆಯಿಂದ ಜಪಿಸಿಹೆವು ಹರಿ ನಾಮವನು,
ಹೇಳಲಸಾಧ್ಯ ಅವನ ಯಶೋಪಮಾನವನು
ನಾನಕನೆ ಅವನು ಎಲ್ಲದರಲ್ಲೂ ಪಸರಿಸಿರುವನು ॥ 6 ॥

20/7

ಪ್ರಭು ಕ್ಷಮಾಶೀಲನು, ದೀನದಯಾಳು
ಭಕ್ತರ ಪ್ರಿಯನು, ಸದಾ ಕೃಪಾಳು
ಅನಾಥರ ನಾಥ, ಗೋವಿಂದ್ ಗೋಪಾಲ
ಎಲ್ಲಾ ಶರೀರಗಳ, ಪ್ರಭು ಪ್ರತಿಪಾಲ
ಆದಿ ಪುರುಷನು, ಕಾರಣಕಾರಕನು
ಭಕ್ತರ ಪ್ರಾಣ ಆಶ್ರಯದಾತನು
ಜಪಿಸುವರ ಮನ ಪವಿತ್ರವಾಗುವುದು
ಭಕ್ತಿಯಲಿ ಮನ ಪ್ರೇಮದಿಂದಿಹುದು
ನಾವು ಗುಣಹೀನರು, ನೀಚರ ಜ್ಞಾನಿಗಳು
ನಾನಕನೆ, ಅಕಾಲಪುರುಷನ ಶರಣಾಳುಗಳು ॥ 7 ॥

20/8

ಸರ್ವರಿಗೂ ಮುಕ್ತಿ ಮೋಕ್ಷ ಆನಂದ
ಒಂದು,ಕ್ಷಣ ಹರಿ ಗುಣ ಹಾಡುವುದರಿಂದ

20/6

ಉಪಜೀ ಪ್ರೀತಿ ಪ್ರೇಮ್ ರಸು ಚಾಉ
ಮನ್ ತನ್ ಅಂತರಿ ಇಹೀ ಸುಆಉ
ನೇತ್ರಹು ಪೇಖಿ ದರಸು ಸುಖುಹೋಇ
ಮನು ಬಿಗಸೈ ಸಾಧ್ ಚರನ್ ಧೋಇ
ಭಗತ್ ಜಾನಾ ಕೈ ಮನಿ ತನಿ ರಂಗು
ಬಿರಲಾ ಕೋಊ ಪಾವೈ ಸಂಗು
ಏಕ್ ಬಸತು ದೀಜೈ ಕರಿ ಮಇಆ
ಗುರ್ ಪ್ರಸಾದಿ ನಾಮು ಜಪಿ ಲಇಆ
ತಾಕೀ ಉಪಮಾ ಕಹೀ ನ ಜಾಇ
ನಾನಕ್ ರಹಿಆ ಸರಬ್ ಸಮಾಇ ॥ 6 ॥

20/7

ಪ್ರಭ್ ಬಖ್‌ಸಂದ್ ದೀನ್ ದಇಆಲ್
ಭಗ್‌ತಿ ವಛಲ್ ಸದಾ ಕಿರ್‌ಪಾಲ್
ಅನಾಥ್ ನಾಥ್ ಗೋಬಿಂದ್ ಗುಪಾಲ್
ಸರಬ್ ಘಟಾ ಕರತ್ ಪ್ರತಿಪಾಲ್
ಆದಿ ಪುರಖ್ ಕಾರಣ್ ಕರ್‌ತಾರ್
ಭಗತ್ ಜನಾ ಕೇ ಪ್ರಾನ್ ಅಧಾರ್
ಜೋ ಜೋ ಜಪೈ ಸು ಹೋಇ ಪುನೀತ್
ಭಗತಿ ಭಾಇ ಲಾವೈ ಮನ್ ಹೀತ್
ಹಮ್ ನಿರ್‌ಗುನೀ ಆರ್ ನೀಚ್ ಅಜಾನ್
ನಾನಕ್ ತುಮರೀ ಸರನೀ ಪುರಖ್ ಭಗ್‌ವಾನ್ ॥ 7 ॥

20/8

ಸರಬ್ ಬೈಕುಂಠ್ ಮುಕ್‌ತಿ ಮೋಖ್ ಪಾಏ
ಏಕ್ ನಿಮಖ್ ಹರಿ ಕೇ ಗುನ್ ಗಾಏ

ಇಚ್ಛೆ ಪೂರ್ಣವಾಯಿತು, ಶ್ರದ್ಧಾ ಪೂರ್ಣವಾಯಿತು
ಪ್ರಭುವು ಸದಾ ಜೊತೆಯಲ್ಲಿ ಒಡಗೂಡಿದಂತಾಯಿತು
ಯಾರದಾಗಿದ್ದನೋ ಅವನು ಜೊತೆ ಸೇರಿರುವನು
ನಾನಕನೆ, ಅವನು ಭಕ್ತಿ ಮತ್ತು ನಾಮದಲ್ಲಿ ಸದಾ ಮಗ್ನನು ॥ 3 ॥

20/4

ಪಟ್ಟ ಶ್ರಮವನ್ನು ನಿರ್ಲಕ್ಷಿಸದವನನೇಕೆ ಮರೆಯುವೆ ?
ನಾವು ಮಾಡಿದುದನೆಲ್ಲ ತಿಳಿದವನನೇಕೆ ಮರೆಯುವೆ ?
ಬಯಕೆಗಳನೆಲ್ಲ ನೀಡಿರುವನ ಏಕೆ ಮರೆಯುವೆ ?
ಎಲ್ಲ ಜೀವಿಗಳ ಜೀವವಾಗಿರುವನ ಏಕೆ ಮರೆಯುವೆ ?
ಗರ್ಭಾಗ್ನಿಯಿಂದ ಕಾಪಾಡುವನನೇಕೆ ಮರೆಯುವೆ ?
ದೇವಾನುಗ್ರಹದಿಂದ ಅವನನ್ನು ಅರಿತವರೆಲ್ಲೋ ಕೆಲವೆ
ವಿಶ್ವ ವಿಷಯ ವಾಸನೆಯಿಂದ ಪಾರಾಗಿಸುವನ ಹೇಗೆ ಮರೆಯುವೆ?
ಜನ್ಮ ಜನ್ಮಗಳ ಜೋಡಣೆ ನೀಡುವನ ನೀ ಹೇಗೆ ಮರೆಯುವೆ ?
ಗುರು ಪೂರ್ಣನು ಈ ತತ್ವವನ್ನು ಅರಿವಾಗುವಂತೆ ತಿಳಿಸುವನು
ನಾನಕನೆ! ಅದಕೆಂದೆ ಭಕ್ತನು ತನ್ನ ಪ್ರಭುವನ್ನು ಸ್ಮರಿಸುವನು ॥4॥

20/5

ಹೇ ಸಜ್ಜನ ಸಂತ ಮಹಾಜನರೆ, ಮಾಡಿರಿ ನೀವೀಕೆಲಸವನು
ತ್ಯಾಗವ ಮಾಡಿ ಸರ್ವಸ್ವವನೂ ಜಪಿಸಿರಿ ದಿನ ಹರಿನಾಮವನು
ಸ್ಮರಿಸಿ ಸ್ಮರಿಸಿ ಸ್ಮರಿಸಿ ಸುಖ ಸಂಪಾದಿಸಿರಿ
ಜಪಿಸುತ ನೀವೇ ಇತರರಿಂದಲು ಜಪಿಸಿಸಿರಿ
ಭಕ್ತಿ ಪ್ರೇಮ ಜಪಗಳಿಂದ ಸಂಸಾರಾಂಬುಧಿ ದಾಟುವುದು
ಭಕ್ತಿ ಇಲ್ಲದೆ ಈ ದೇಹ ಬೂದಿಯಾಗಿ ಹೋಗುವುದು
ಸರ್ವ ಕಲ್ಯಾಣಗುಣಗಳಿಗೂ ಸುಖದ ನಿಧಿ ದೇವರನಾಮ
ಮುಳುಗುವವನಿಗೆ ಬದುಕಿಸುವುದು ದೇವರ ನಾಮ
ಜಪದಿಂದ ಸಕಲ ದುಃಖಗಳೂ ನಾಶವಾಗುವುವು
ನಾನಕ ಹರಿಗುಣದ ಭಂಡಾರವನು ನಾವು ಸ್ಮರಿಸುವೆವು ॥ 5 ॥

ಇಛ್ ಪುನೀ ಸರ್‌ಧಾ ಸಭ್ ಪೂರೀ
ರವಿ ರಹಿಆ ಸದ್ ಸಂಗಿ ಹಜೂರೀ
ಜಿಸ್ ಕಾ ಸಾ ತಿನಿ ಲೀಆ ಮಿಲಾಇ
ನಾನಕ್ ಭಗತಿ ನಾಮಿ ಸಮಾಇ ॥ 3 ॥

## 20/4

ಸೋ ಕಿಉ ಬಿಸರೈ ಜಿ ಘಾಲ್ ನ ಭಾನೈ
ಸೋ ಕಿಉ ಬಿಸರೈ ಜಿ ಕೀಆ ಜಾನೈ
ಸೋ ಕಿಉ ಬಿಸರೈ ಜಿನಿ ಸಭು ಕಿಛು ದೀಆ
ಸೋ ಕಿಉ ಬಿಸರೈ ಜಿ ಜೀವನ್ ಜೀಆ
ಸೋ ಕಿಉ ಬಿಸರೈ ಜಿ ಅಗನಿ ಮಹಿ ರಾಖೈ
ಗುರ್ ಪ್ರಸಾದಿ ಕೋ ವಿರ್‌ಲಾ ಲಾಖೈ
ಸೋ ಕಿಉ ಬಿಸರೈ ಜಿ ಬಿಖು ತೇ ಕಾಢೈ
ಜನಮ್ ಜನಮ್ ಕಾ ಟೂಟಾ ಗಾಢೈ
ಗುರಿ ಪೂರೈ ತತು ಇಹೈ ಬುಝಾಇಆ
ಪ್ರಭು ಅಪನಾ ನಾನಕ್ ಜನ್ ಧಿಆಇಆ ॥ 4 ॥

## 20/5

ಸಾಜನ್ ಸಂತ್ ಕರಹು ಇಹು ಕಾಮು
ಆನ್ ತಿಆಗಿ ಜಪಹು ಹರಿ ನಾಮು
ಸಿಮರಿ ಸಿಮರಿ ಸಿಮರಿ ಸುಖ್ ಪಾವಹು
ಆಪಿ ಜಪಹು ಅವರಹ್ ನಾಮು ಜಪಾವಹು
ಭಗತಿ ಭಾಇ ತರೀಐ ಸಂಸಾರು
ಬಿನು ಭಗತೀ ತನು ಹೋಸೀ ಛಾರು
ಸರಬ್ ಕಲಿಆಣ್ ಸೂಖ್ ನಿಧಿ ನಾಮು
ಬೂಡತ್ ಜಾತ್ ಪಾಏ ಬಿಸ್ರಾಮು
ಸಗಲ್ ದೂಖ್ ಕಾ ಹೋವತ್ ನಾಸು
ನಾನಕ್ ನಾಮು ಜಪಹು ಗುನ್‌ತಾಸು ॥ 5 ॥

ಸಂತರ ಪಾದಧೂಳನ್ನು ನಾನು ಬೇಡುವೆನು
ಎನ್ನಾಸೆ ಪೂರ್ಣಗೊಳಿಸೆಂದು ಪ್ರಭುವನ್ನು ಕೇಳುವೆನು
ಸದಾಕಾಲ ಪ್ರಭುವಿನ ಗುಣಗಾನ ಮಾಡುವೆನು
ಪ್ರಭುವೇ ! ಉಸಿರುಸಿರಿಗೂ ನಿನ್ನ ನಾಮ ಜಪಿಸುವೆನು
ನಿನ್ನ ಚರಣಾರವಿಂದವನು ಸದಾ ಪ್ರೀತಿಸುವೆ ನಾನು
ಸದಾ ಭಗವಂತನ ಭಕ್ತನಾಗಿರುವೆ ನಾನು
ಅವನೊಬ್ಬನದೆ ಎನಗಾಸರೆ ಒಬ್ಬನದೆ ಆಶ್ರಯವು
ನಾನಕ ಯಾಚಿಸುವುದು ಪ್ರಭು ನಾಮದ ಮೂಲವು ॥ 1 ॥

20/2

ಪ್ರಭುವಿನ ದೃಷ್ಟಿಯಿಂದ ಅಮಿತಾನಂದ ಲಭಿಸುವುದು
ಕೆಲವರಿಗೆ ಮಾತ್ರ ಹರಿರಸವು ದೊರಕುವುದು
ಅದರ ಸ್ವಾದವರಿತವರು ಪೂರ್ಣ ತೃಪ್ತರು
ಆ ಪೂರ್ಣ ಪುರುಷರು ದೋಷವೆಸಗರು
ಪ್ರೇಮರಸದ ರಂಗಿನಲ್ಲಿ ತುಂಬಿ ತುಳುಕುವರು
ಸಾಧುಗಳ ಸಂಗದಿಂದ ಬಯಕೆಯೊಡನೆ ಬೆಳಗುವರು
ಆ ದೋಷಗಳನು ತ್ಯಾಗಮಾಡಿ ಶರಣಾಗಿಹೆವು ಬಂದು
ಅಂತರವು ಬೆಳಗಿದೆ ದಿನರಾತ್ರಿ ನಿನ್ನೊಡನಾಗಿ ಒಂದು
ಭಾಗ್ಯವಂತರು ಪ್ರಭುವನ್ನು ಬಹಳ ಜಪಿಸುವರು
ಹೇ ನಾನಕ, ನಾಮ ಜಪದಿಂದ ಸರ್ವ ಸುಖ ಹೊಂದುವರು ॥ 2 ॥

20/3

ಸೇವಕನ ಮನದಾಸೆ ಪೂರ್ಣವಾಯಿತು
ಸದ್ಗುರುವಿನಿಂದ ನಿರ್ಮಲ ಜ್ಞಾನ ಲಭಿಸಿತು
ಪ್ರಭು ತನ್ನ ಭಕ್ತರಿಗೆ ಸದಾ ದಯಾಮಯನು
ಸೇವಕನನ್ನು ಎಂದೆಂದೂ ಉನ್ನತನಾಗಿಸಿದನು
ಬಂಧನವು ಕಡಿದು ಭಕ್ತ ಮುಕ್ತನಾದನು
ಹುಟ್ಟು ಸಾವಿನ ದುಃಖ ಭ್ರಮೆ ದೂರವಾಯಿತು

ಸಾಧ್ ಜನಾ ಕಿ ಮಾಗಲು ಧೂರಿ
ಪಾರ್‌ಬ್ರಹಮ್ ಮೇರೀ ಸರ್‌ಧಾ ಪೂರಿ
ಸದಾ ಸದಾ ಪ್ರಭ್ ಕೇ ಗುನ್ ಗಾವ್‌ಉ
ಸಾಸಿ ಸಾಸಿ ಪ್ರಭ್ ತುಮ್‌ಹಿ ಧಿಆವ್‌ಉ
ಚರನ್ ಕಮಲ್ ಸಿಉ ಲಾಗೈ ಪ್ರೀತಿ
ಭಗತಿ ಕರಉ ಪ್ರಭ್ ಕೀ ನಿತ್ ನೀತಿ
ಏಕ್ ಓಟ್ ಏಕೋ ಆಧಾರು
ನಾನಕು ಮಾಗೈ ನಾಮು ಪ್ರಭ್ ಸಾರು ॥ 1 ॥

20/2

ಪ್ರಭ್ ಕೀ ದ್ರಿಸ್‌ಟಿ ಮಹಾ ಸುಖ್ ಹೋಇ
ಹರಿ ರಸು ಪಾವೈ ವಿರಲಾ ಕೋಇ
ಜಿನ್ ಚಾಖಿಆ ಸೆ ಜನ್ ತ್ರಿಪ್‌ತಾನೆ
ಪೂರನ್ ಪುರಖ್ ನಹೀ ಡೋಲಾನೆ
ಸುಭರ್ ಭರೇ ಪ್ರೇಮ್ ರಸ್ ರಂಗಿ
ಉಪ್‌ಜೈ ಚಾಉ ಸಾಧ್‌ಕೈ ಸಂಗಿ
ಪರ್ ಸರ್‌ನಿ ಆನ್ ಸಭ್ ತಿಆಗಿ
ಅಂತರಿ ಪ್ರಗಾಸ್ ಅನ್‌ದಿನು ಲಿವ್‌ಲಾಗಿ
ಬಡ್‌ಭಾಗೀ ಜಪಿಆ ಪ್ರಭು ಸೋಇ
ನಾನಕ್ ನಾಮಿ ರತೇ ಸುಖು ಹೋಇ ॥ 2 ॥

20/3

ಸೇವಕು ಕೀ ಮನ್‌ಸಾ ಪೂರೀ ಭಾಈ
ಸತಿಗುರ್ ತೇ ನಿರ್‌ಮಲ್ ಮತಿ ಲಾಈ
ಜನ್ ಕಉ ಪ್ರಭು ಹೋಇಓ ದಇಆಲು
ಸೇವಕು ಕೀನೋ ಸದಾ ನಿಹಾಲು
ಬಂಧನ್ ಕಾಟಿ ಮುಕ್‌ತಿ ಜನು ಭಇಆ
ಜನಮ್ ಮರನ್ ದುಖು ಭ್ರಮು ಗಇಆ

 

ಹೇ ಮನವೆ ! ನಿನ್ನ ಸಂಕುಚಿತತನ ಬಿಟ್ಟುಬಿಡು ನೀನು
ಗಳಿಸುವೆ ಸಂತ ಸಂಗದಿಂದ ಸದ್ಧನವ ನೀನು
ಹರಿನಾಮದ ಧನ ಗಳಿಸಿ ವ್ಯವಹರಿಸು ನೀನು
ಅನುಭವಿಸು ಇಹದ ಸುಖ ದೇವಮಂದಿರದ ಜೈಕಾರವನು
ಅವನು ಎಲ್ಲದರಲೂ ಒಬ್ಬ ಹರಿಯನ್ನು ನೋಡುವನು
ಹೇ ನಾನಕ ! ಯಾರ ಹಣೆಬರಹ ಹೇಗೋ ಹಾಗೆ ನೋಡುವನು

19/8

ಒಬ್ಬನನೆ ಧ್ಯಾನಿಸು, ಒಬ್ಬನನೆ ಪ್ರಶಂಸಿಸು
ಒಬ್ಬನನೆ ಸ್ಮರಿಸು ನೀ ಒಬ್ಬನನೆ ಮನದಲಿರಿಸು
ಒಬ್ಬನೇ ಅನಂತನ ಮಾಡು ನೀ ಗುಣಗಾನ
ತನು ಮನದಲಿ ಜಪಿಸು ಒಬ್ಬನೇ ಭಗವಂತನ
ಒಬ್ಬನೇ ಒಬ್ಬನಾದ ಒಬ್ಬ ಹರಿ ನೀನೇ
ಪೂರ್ಣದಲ್ಲಿ ಪೂರ್ಣ ಸಂಪೂರ್ಣನೂ ನೀನೇ
ಒಬ್ಬ ಹರಿಯಿಂದ ಅನೇಕ ವಿಶಾಲತೆಯಾಗಿದೆ
ಒಂದರ ಆರಾಧನೆಯಿಂದ ಪಾಪ ನಾಶವಾಗಿದೆ
ತನು ಮನದಲಿ ಪ್ರಭು ಒಬ್ಬನೇ ರಚಿಸಿದನೆಲ್ಲವನು
ಹೇ ನಾನಕ ! ಗುರುವಿನ ಕೃಪೆಯಿಂದ ಎಲ್ಲಾ ಒಂದೆನ್ನುವನು ॥ 8 ॥

ಶ್ಲೋಕ :

ಅಲೆಅಲೆದಾಡುತ ಪ್ರಭು, ಬಂದಿಹೆನು
ಶರಣಾಗಲು ನಿನ್ನ ಚರಣ ಕಮಲದಲಿ
ಪ್ರಭುವಿಗೆ ನಾನಕ ವಿನಂತಿಸುವನು
ಅವನನ್ನಿಡಲು ಸದಾ ತನ್ನ ಭಕ್ತಿಯಲಿ

ಅಷ್ಟಪದಿ—20

ಯಾಚಿಸುವರು ಯಾಚಕರು ಪ್ರಭುವಿನಿಂದ ದಾನ
ದಯಮಾಡಿ ನೀಡೆಮಗೆ ಹರಿನಾಮ ಧ್ಯಾನ

ಛಾಡಿ ಸಿಆನಪ್ ಸಗಲೀ ಮನಾ
ಸಾಧ್ ಸಂಗಿ ಪಾವಹಿ ಸಚು ಧನಾ
ಹರಿ ಪೂಜೀ ಸಂಚಿ ಕರಹು ಬಿಉಹಾರ್
ಈಹಾ ಸುಖ್ ದರ್‌ಗಹ್ ಜೈಕಾರ್
ಸರಬ್ ನಿರಂತರಿ ಏಕೋ ದೇಖ್
ಕಹ್ ನಾನಕ್ ಜಾ ಕೈ ಮಸ್‌ತಕಿ ಲೇಖ್ ॥ 7 ॥

19/8

ಏಕೋ ಜಪಿ ಏಕೋ ಸಾಲಾಹಿ
ಏಕ್ ಸಿಮರಿ ಏಕೋ ಮನ್ ಆಹಿ
ಏಕಸ್ ಕೇ ಗುನ್ ಗಾಉ ಅನಂತ್
ಮನಿ ತನಿ ಜಾಪಿ ಏಕ್ ಭಗವಂತ್
ಏಕೋ ಏಕ್ ಏಕ್ ಹರಿ ಆಪಿ
ಪೂರನ್ ಪೂರಿ ರಹಿಓ ಪ್ರಭು ಬಿ ಆಪಿ
ಅನಿಕ್ ಬಿಸ್‌ಥಾರ್ ಏಕ್ ತೇ ಭಏ
ಏಕ್ ಅರಾಧಿ ಪರಾಛತ್ ಗಏ
ಮನ್ ತನ್ ಅಂತರಿ ಏಕ್ ಪ್ರಭು ರಾತಾ
ಗುರ್ ಪ್ರಸಾದಿ ನಾನಕ್ ಇಕ್ ಜಾತಾ ॥ 8 ॥

ಸಲೋಕು :

ಫಿರತ್ ಫಿರತ್ ಪ್ರಭು ಆಇಆ
ಪರಿಆ ತಉ ಸರ್‌ನಾಇ
ನಾನಕ್ ಕೀ ಪ್ರಭು ಬಿನತೀ
ಅಪನೀ ಭಗತಿ ಲಾಇ

ಅಸಟ್‌ಪದಿ—20

ಜಾಚಕ್ ಜನು ಜಾಚೈ ಪ್ರಭ್ ದಾನು
ಕರಿ ಕಿರ್‌ಪಾ ದೇವಹು ಹರಿ ನಾಮು

19/5

ನಿನ್ನ ಧನವೇ ನಿನ್ನ ಜೊತೆ ಬರದು
ಮೂರ್ಖ ಮನ, ಅದನೇಕೆ ನೀ ಹಿಡಿದಿಡುವುದು
ಮಡದಿ ಮಕ್ಕಳು ಕುಟುಂಬ ಸ್ನೇಹಿತರು
ಹೇಳು ಇದರಲ್ಲಿ ಯಾರು ನಿನ್ನ ಸಹಾಯಕರು
ರಾಜ ರಾಜ್ಯಾಂಗ ಭೋಗ ಪ್ರಕೃತಿ ಮಾಯೆಗಳೆಲ್ಲ
ಇವುಗಳಿಂದೆಂದೂ ಬಿಡುಗಡೆಯೆ ಇಲ್ಲ
ಆನೆ ಕುದುರೆ ಪದಾತಿ ರಥಗಳ ಸವಾರಿ
ಬರಿಯ ತೋರಿಕೆಗೆ ಅದು ಒಣ ಆಡಂಬರವೆ ಸರಿ
ಅರಿಯನು ಮಾನವನು ಈ ಪ್ರೇಮದ ವರದಾನಿಯನು
ಪಶ್ಚಾತ್ತಾಪವೆ ಕೊನೆಗೆ ಮರೆತರೆ ಹರಿನಾಮವನು ॥ 5 ॥

19/6

ಹೇ ಅಜ್ಞಾನಿ, ಗುರು ಮತವನೆ ನೀ ಸೇರು
ಭಕ್ತಿ ಇರದ ಜಾಣರು ಮುಳುಗಿಹೋದರನೇಕರು
ಗೆಳೆಯ ! ಹರಿ ಸ್ಮರಣೆ ಮಾಡು ನೀ ಮನದಲ್ಲಿ
ನಿನ್ನ ಮನ ನಿಲ್ಲುವುದು ಸದಾ ನಿರ್ಮಲತೆಯಲ್ಲಿ
ಹರಿ ಚರಣ ಕಮಲವಿಡು ನೀ ನಿನ್ನ ಹೃದಯದಲಿ
ಜನುಮ ಜನುಮಗಳ ಕಿಲುಬು ವಿಷ ನಾಶವಾಗಲಿ
ಜಪಿಸಿ ನೀ ಹರಿನಾಮವನು ಇತರರಿಂದದನು ಜಪಿಸಿಸು
ಕೇಳುತ್ತ ಹೇಳುತ್ತ ಮುಕ್ತಿಯನೆ ನಿನದಾಗಿಸು
ಮೂಲಭೂತವಾಗಿರುವ ಹರಿನಾಮ ಸತ್ಯ
ಹೇ ನಾನಕ ಸಹಜದಲ್ಲಿ ಹರಿಗುಣ ಹಾಡು ದಿನ ನಿತ್ಯ ॥ 6 ॥

19/7

ನಿನ್ನ ಗುಣಗಾನದಿಂದ ಮನದ ಕೊಳೆ ಕಳೆಯುವುದು
ನಿನ್ನೊಳಗೆ ಹರಡಿರುವ ಅಹಂಕಾರದ ವಿಷ ನಾಶವಾಗುವುದು
ಚಿಂತೆ ಇಲ್ಲದೆ ಸುಖವಾಗಿ ಕುಳಿತಿರಲು ನೀನು
ಉಸಿರುಸಿರಿಗೂ ನೆನೆಸು ಶ್ರೀಹರಿನಾಮವನ್ನು